ಭಾಗ ೧

ಜತಿಸ್ವರಗಳು

ಸ್ವರಜತಿಗಳು

ತಾನವರ್ಣಗಳು

ಕೃತಿಗಳು

# ಜತಿಸ್ವರಗಳು

## ೧

ರಾಗ : ಹಂಸಧ್ವನಿ   ತಾಳ : ಆದಿ

1 ‖ ಸಾ , ನಿ ಪ ಗ ರಿ ಸ । ರೀ ೯ , ಗ । ರಿ ಗ ಪ ನಿ ‖ ಸಾ

2 ‖ ಸನಿಪ ಸಾನಿಪಗ ನಿಪಾ ಗಪಗರಿಸ । ನಿಪಾ ನಿಸರಿಗಪ । ನಿಪಾ ಗರಿಗಪನಿ ‖ ಸಾ

3 ‖ ಸನಿಸ ರೀಸನಿಪ ಗಪನಿ ಸಾನಿಪಗ । ರಿಗಪ ನೀಪಗರಿ । ಸರಿಗ ರೀಗಪನಿ ‖ ಸಾ

4 ‖ ಪಾ , ಪನಿಸನಿ ಪಗರಿಸರಿಗ । ಪಾ , ಪನಿ । ಸರಿಸನಿ ಪಗರಿಗ ‖
‖ ಪಾ , ನಿಪಗರಿಸ ನೀಸರಿಗ । ಪಾ , ಸನೀಪಗ । ಪಾ , ಗರಿಗಪನಿ ‖ ಸಾ

5 ‖ ಸಾ , ರಿಗರಿಸ ನಿಪಗರಿಸರಿ । ಗಾ ೯ ರಿಗ । ಪಗರಿ ಸನಿಪಸನಿ ‖
‖ ಸಾ , ರಿಗರಿಸನಿ ಪಾನಿಸರಿ । ಗಾ , ಪಗರಿಸರಿ । ಗಾ , ನಿಪಾಗರಿ ‖
‖ ಗಾ , ಸನಿಪಗರಿ ಗಾ , ಸರಿಗಪನಿ । ಸರಿಸ ನಿಸನಿ ಪನಿ । ಪ ಗಪಗ ರಿಸರಿಗ ‖
‖ ಪನಿಸರಿ ಗಪಗರಿ ಸಗರಿಸ ನಿಪನಿಸ । ರಿ ಗರಿಸನಿಪ ಸನಿ । ಪಗರಿ ಸರಿಗಪನಿ ‖ ಸಾ

## ೨

ರಾಗ : ತೋಡಿ   ತಾಳ : ಆದಿ

1 ‖ ಸಾ ; ; ಸಾ ನೀ ದಾ ಪಾ ಮಾ । ಗಾ ; ; ದಾ । ; ಪಾ ಮಾ ಗಾ ‖
‖ ರೀ ; ; ರೀ ಸಾ ನೀ ಧಾ ನೀ । ಸಾ ; ; ಗಾ । ಮಾ ಪಾ ದಾ ನೀ ‖ ಸಾ

2 ‖ ಸರಿಸನೀ , ನಿಸನಿದಾ ನಿಸನಿಸರಿ । ಸಾ ; ; ಸನಿ । ದಪಮ ಗಮಪದನಿ ‖
‖ ಸರಿಸನೀ , ನಿಸನಿದಾ ನಿಸನಿಸರಿ । ಸನಿ ೯ ದಪ ಗಾರಿ । ಸಗಾಮ ಪದಾನಿ ‖ ಸಾ

3 ‖ ದಾ ; ; ದನಿದಪಮ ಗಮಪದನಿ । ದಾ ; ; ದನಿ । ಸನೀ ರಿಸನಿದನಿ ‖
‖ ದಾ ; ; ದನಿದಾ ; ; ನಿಸ । ದಾ ; , ನಿಸರಿ । ದಾ ; , ಗಮಗ ‖
‖ ದಾ ನಿದಪಮಗಮದಾ ನಿಪದನಿಸನಿ । ದಾ ನಿಸದಾ ರಿಸ । ದಾ ಗರಿಸದಾನಿ ‖ ಸಾ

4 ‖ ಸಾ ; ; ರಿನಿ ಸದ ನೀ,ದಪಮ । ಪಾಪಗ ಮಗರಿಸ । ರಿನಿ ಸದ ನಿಧ ಸನಿ ‖
‖ ಸಾ ; ; ; ; , ಧನಿಸರಿನಿ । ಸರಿಗ ಸರಿಗಮ ಗ । ಮಪದ ನಿದಮದನಿ ‖
‖ ಸಸಾನಿ ದನಿಸನಿ ದಾ ; ನಿನೀದ । ಪದನಿದ ಪಾ ; । ದದಾಮ ದನಿಸರಿ ‖
‖ ಸಗರಿಸ ನಿದನಿಸ ರಿಸನಿದ ಪಮಗಮ । ಪದನಿ ಪದನಿಸ ದ । ನಿ ದಸ ನಿರಿಸರಿನಿ ‖ ಸಾ

# ಸ್ವರಜತಿಗಳು

## ೧

ರಾಗ : ಹಂಸಧ್ವನಿ ತಾಳ : ಆದಿ

ಮೈಸೂರು ಸದಾಶಿವರಾಯರು

### ಪಲ್ಲವಿ

॥ ಗಾ , ಪಾ ಗಾ ರಿ । ಸಾ , ನಿ । ೯ ಸಾ ರಿ ॥

ಶ್ರೀ ರಾ ಮಾ ಭಿ ರಾ ಮ ನಾ ಮ

॥ ಸ ರಿ ೯ ಗ ರಿ ಗಾ ಪ । ಗಾ ನಿ ಪಾ ಸ ನಿ ಪ । ಗ.ಪಾ , ಗ ರಿ ಸ ರಿ ॥

ಚಿ ತ್ತಂ ಬು ನೀ ಪಾ ದ । ಪಂ ಕ ಜಂ ಬುಪೈ ಸ ದಾ ಯುನಿಚಿ ತಿ ॥

### ಚರಣ

1 ॥ ಪಾ , ನಿ ಪ ಗ ಪಾ । ಸ ನಿ ಪ ನಿ । ಪ ಗ ಪ ಗ ॥

ನೇ ರ ಮು ಲ ನೆಂ ಚ ಕು ಕ ರು ಣ ಗ ಲಿ ಗಿ

॥ ರಿ ಗ ಪ ನಿ ಸ ರಿ ಸಾ ಸ ನಿ ಪ ಗಾ ನಿ ಪಾ । ಗ ರಿ ರೀ ಸ ಸಾ ನಿ । ಪಾ ಗ ರಿ ಸ ರಿ ॥

ನ ನು ಕ ರ ಮುಲಚೇ ಬ ಲಿ ಮಿ ಗಾ ದ ಯಾ ಸ್ವಿ ತ ಪ ಟ್ಟ ಯಾ ದ ರಿಂ ಚು ಮಿ ಯಿ ಕ ॥ ಶ್ರೀ

2 ॥ ಪ ನಿ ಸ ರೀ ೯ ಗ ಪ ನಿ ಸಾ ರಿ ಗ ಪ ನೀ ೯ ಸ । ರಿ ಗ ಪಾ ಪ ಗ ರಿ ಸ । ನಿ ಪ ಗ ರಿ ಸ ನಿ ಸ ರಿ ॥

ನಿ ನುವಿ ನಾ ನ ನುಕೃತಾ ರ್ಥುನಿ ಗ ಚೇ ಯು ಟಕು ನೀ ಜ ಗ ತಿ ಲೋ ನೆ ವ ರು ರ ನೃ ಪ ವ ರ ॥ ಶ್ರೀ

3 ॥ ಗ ಪ ರಿ ಗ ಸ ರಿ ಸ ನಿ ಪಾ ನಿ ಸ ರಿ ಗ । ಪ ನಿ ಸ ರಿ ಸಾ । ರಿ ಸಾ ನಿ ಸ ನೀ ಪ ॥

ಮುನಿ ನುತ ದ ನುಜ ವಿ ದಾ ರ ಣ ಸು ರ ಹಿ ತ ಶು ಭ ವೀ ಕ್ಷಣಾ ಭ ಯ ಹ ಸ್ತ ॥ ಶ್ರೀ

4 ॥ ಪಾ ನೀ ಸಾ ರಿ ಸಾ ನಿ ಪ ನಿ ಸ ಪ ಸಾ । ಪ ನೀ ಗ ಪಾ ರಿ ಗ । ಸ ರೀ , ಸ ನಿ ಪ ಗ ॥

ಶ್ರೀ ಸೀ ತಾ ವಿ ಹಾ ರ ಚ ತು ರ ಸ ದಾ ಶಿ ವಾ ರ್ತಿಭಂ ಜ ನ ಸ ರೋ ಜ ನ ಯನ

ಸ ರಿ ಗ ಸ ರಿ ಸ ರಿ ಸ ನಿ ಪ ಗ ರಿ ಸ ನಿ ಪ ಗ । ರಿ ಸ ರಿ ಗ ಸ ರಿ ನಿ ಸ । ಪ ನಿ ಗ ಪ ರಿ ಗ ಸ ರಿ ॥

ಮದ ನ ಜ ನ ಕ ಪ ಟು ತರ ಸು ವ ಚ ನ ದ ಶ ರ ಥ ಸುತ ಸ ದ ಯ ಹೃ ದಯವಿ ಧಿ ಹ ರ ನುತ ॥ ಶ್ರೀ

೩

ರಾಗ : ಆನಂದಭೈರವಿ ತಾಳ : ಆದಿ

ಶೋಭನಾದ್ರಿ ಸ್ವಾಮಿಗಳು

## ಪಲ್ಲವಿ

॥ ಪಾ ; ಪ ಮ ಗ ಮ ಪಾ ಮಾ ಪ ಮ ಗ ರಿ । ಸಾ ; ; ಮಾ । ಗಾ ರೀ ಸಾ ನೀ ॥
ರಾ ವೆ ಮೆ ಮು ಗು ವಾ ವಿ ನ ವು ತ ಗ

॥ ಸಾ ; ; ಸಾ ; ನೀ ಗಾ , ರಿ । ಸ ಗ ರಿ ಗಾ ಮ ಗ ಮ । ಪ ದ ಪ ಪಾ ಮ ಗ ಮ ॥
ವಾ ವೇ ಡು ಕ ನು ಕ ರು ಣ ನೇ ಡು ವ ಗ ಗುಲುಕ ತೋಡು ಕೊನಿ ॥ ರಾವೇ

## ಅನುಪಲ್ಲವಿ

॥ ಪಾ , ಮಾ , ಪಾ ನೀ ನೀ ಸಾ ಸಾ । ಸಾ , ಮಾ , ಗಾ । ರೀ ಸಾ ನೀ ಸಾ ॥
ವೇ ವೇ ಗ ಮು ಗ ಚ ನಿ ನಾ ವಿ ಭು ಗ ನು ಗೊ ನಿ

॥ ಪಾ , ಸಾ , ಸಾ ನೀ ದಾ ಪಾ ಮಾ । ಮಾ , ಪಾ , ಮಾ । ಗಾ ರೀ ಗಾ ಮಾ ॥
ಈ ವಾ ದು ವ ಲ ದ ನಿ ಈ ಮಾ ಟ ವಿ ನು ಮ ನಿ ॥ ರಾವೇ

## ಚರಣಗಳು

1 ॥ ಪಾ ಪಾ ದ ಪ ಮ ಗ ಮಾ ಮಾ ಪ ಮ ಗ ರಿ । ಗಾ ಗಾ ಮ ಗ ರಿ ಸ । ನೀ ಸ ಗ ರಿ ಗ ಮ ಪ ॥
ಆ ಮಾ ನಿ ನಿ ವ ಗ ಲೇ ನೊ ಚ ಲು ವು ನ ಕೇ ಮೋ ಘ ನ ಮು ಗ ದೋ ಚಿ ನ ನು ಮ ರ ಚಿ

॥ ರಿ ಸ ನೀ ಸ ಗ ರಿ ಸ ಪ ಮ ಗ ರಿ ನಿ ಸಾ ಗ । ರೀ ಮ ಗಾ ಪ ಮಾ । ಪ ದ ಪ ಪಾ ಮ ಗ ಮ ॥
ನ ಟ ನೇ ಮನುಕೊನುಯುಟ ನಿ ಕ ಮ ನಂ ಬು ನಂ ದು ನೇ ಮಿ ತೊ ಚ ಕ ನು ನುಂ ಟಿ ಗ ದ ॥ ರಾವೇ

2 ॥ ಪಾ ದ ಪ ಮ ಗ ಮಾ ಮಾ ; ಮಾ ಪ ಮ । ಗ ರಿ ಗಾ ಗಾ ; । ಮ ಪಾ ಮ ಗ ರಿ ಸ ನಿ ॥
ಶ್ರೀ ಕ ರು ಡ ಗು ಶೋ ಭ ನಾ ದ್ರಿ ವಿ । ಭು ಡು ನೇ ಡಾ । ಚಿ ಲಂ ಗ ಲ ಶಿ ನ ಟ

॥ ಸ ಮಾ ಗ ರಿ ಸ ಮ ಪಾ ಮ ಗ ರಿ ಪ ಸಾ ನಿ । ದ ಪ ಮ ಪಾ ಮ ಗ ರಿ । ನೀ ಸ ಗಾ ರಿ ಗ ಮ ॥
ನ ನುಂ ಗ ಲು ವ ಲ ರಾ ಜು ಕ ಳ ನ ದೆ ಲ್ಚು ನ ಟ ಉ ಪಾ ಯ ಮು ನ ತೆ ಲ್ಪಿ ತೋಡುಕೊ ನಿ ॥ ರಾವೇ

# ತಾನ ವರ್ಣಗಳು

## ೧

ರಾಗ : ಶಂಕರಾಭರಣ ತಾಳ : ಆದಿ

ವೀಣಾ ಕುಪ್ಪಯ್ಯರ್

### ಪಲ್ಲವಿ

॥ ಸಾ ; ನಿ ಸ ದ ನಿ ಪಾ ಮ ಪ ಮ ಗ ಮಾ । ಪಾ ದ ನಿ ಪಾ ದ ನಿ । ಸ ರಿ ಸ ನಿ ದ ಪ ದ ನಿ ॥
ಸಾ ಮಿ ನಿ ನ್ನೆ ಕೋ ರಿ

॥ ಸಾ ಸ ದ ಪ ಮ ಪಾ ಪ ಮ ಗ ರಿ ಸ ರಿ ಗ ರಿ । ಸ ನಿ ಧ ನಿ ಸಾ ಪ ಮ । ಗ ರಿ ಗ ಮ ಪಾ ದ ನಿ ॥
ಚಾ ಲ ಮ ರು ಲು ಕೊ ನ್ನ ದಿ ರಾ

### ಅನುಪಲ್ಲವಿ

॥ ಸಾ ದ ದ ಪ ಮ ದ ಪಾ ಮ ಗ ಮ ಪ ಗ ಮ ರಿ । ಗ ಮ ಪ ದ ದ ಪ ಮ ಪ । ದ ನಿ ಸ ನಿ ಸಾ ರಿ ಗ ॥
ತಾ ಮ ಸ ಮು ಸೇ ಯ ಕ

॥ ಮ ಗ ರಿ ಸ ಸ ರಿ ಸ ನಿ ದ ಪ ದ ನಿ ಸ ರಿ ಸಾ । ಸ ದ ಪ ಪಾ ಮ ಗ ರಿ । ಸ ಮ ಗ ಮ ಪಾ ದ ನಿ ॥
ದ ಯ ಜೂ ಡ ರಾ ಗೋ ಪಾ ಲ

### ಚಿಟ್ಟೆಸ್ವರ

॥ ಸ ರಿ ನಿ ಸ ದ ನಿ ಸ ಪ ದ ನಿ ಸ ದ ಪ ಮ ಪ ದ । ಮ ಪ ಗ ಮ ಪ ರಿ ಗ ಮ । ಸ ರಿ ಗ ಮ ಪ ದ ನಿ ಸ ॥
॥ ರಿ ಗ ಮ ಗ ರಿ ಗ ರಿ ಸ ನಿ ಪ ದ ನಿ ಸಾ ಪಾ । ಸ ನಿ ದ ಪಾ ಮ ಗ ರಿ । ಸ ರೀ ಗ ಮ ಪ ದ ನಿ ॥ ಸಾ ಮಿ

### ಚರಣ

॥ ಪಾ ದ ನಿ ಸ ಸ ನಿ ದ ಪ ಮ ಗ ರಿ ಗಾ ಮಾ । ಪಾ ಮ ದಾ ಪ ಸ ನಿ । ದ ಪ ಮ ಗ ಮ ರಿ ಗ ಮ ॥
ನೀ ರ ಜಾ ಕ್ಷಿ ನೀ ಪೈ ನಿ

### ಎತ್ತುಗಡೆ ಸ್ವರ

1 ॥ ಪಾ , ಮಾ , ಪಾ , ಗಾ ಮಾ ರೀ ಗ । ಸಾ , ರೀ , ನಿ ೀ । , ಸಾ ರೀ ಗಾ ಮ ॥ ನೀರಜಾ

2 ॥ ಪ ದಾ ಪ ಮ ಗ ಮ ಪಾ ಮ ಗ ಮ ರಿ ಗಾ ರಿ । ಸ ನಿ ಧ ನೀ ಫ ಧ ನಿ । ಸ ರೀ ನಿ ಸ ರಿ ಗ ಮ ॥ ನೀರಜಾ

3 ॥ ಮಾ ದ ಪ ಮ ಗ ಮಾ ಪ ಗ ಮ ರಿ ಗ ಸಾ ನಿ । ಸ ಮ ಗ ರಿ ಸ ನಿ ಧ ನಿ । ಸ ರಿ ಗ ಮ ಪಾ ಗ ಮ ॥

॥ ಪ ದ ನಿ ಪ ದ ನಿ ಸ ರಿ ಸ ಗ ರೀ ಸ ನಿ ದ ನಿ । ಸಾ ರಿ ನಿ ದ ಪಾ ದ । ಮ ಗ ರಿ ಸಾ ರಿ ಗ ಮ ॥ ನೀರಜಾ

4 ॥ ಪಾ ಮ ಪ ಗ ಮ ರಿ ಗ ಸಾ ಮ ಗ ರಿ ಸ ನಿ ಫ । ಧಾ ನಿ ಸ ರಿ ಸ ನೀ । ಸ ರಿ ಗ ಮ ಪಾ ದ ಪ ॥

॥ ಸಾ ನಿ ರೀ ಸ ಮ ಗ ರಿ ಗ ಸಾ ನಿ ಪ ದ ನಿ । ಸಾ ಸಾ ನಿ ದ ಪಾ । ಮ ಗ ರಿ ಸಾ ರಿ ಗ ಮ ॥ ನೀರಜಾ

* * *

## ೨

ಮಾನಂಬುಚಾವಡಿ ವೆಂಕಟಸುಬ್ಬಯ್ಯರ್

ರಾಗ : ಹಂಸಧ್ವನಿ ತಾಳ : ಆದಿ

### ಪಲ್ಲವಿ

॥ ಗಾ ರೀ ಸಾ ; ನಿ ಸ ರಿ ಗ ರಿ ರಿ ಸ ನಿ । ಸ ರಿ ಸ ಸ ನಿ ಪ ನಿ ಸ । ರಿ ಪಾ ನೀ ಸಾ ರಿ ॥
ಜ ಲ ಜಾ ಕ್ಷ ನಿ ನ್ನೈ ಡ ಬಾ ಸಿ

॥ ಗ ರಿ ಸ ನಿ ಸ ರಿ ಪ ನಿ ಸ ರಿ ಗ ಪ ಗ ನಿ ಪಾ । ಸ ನಿ ಸ ರೀ ಸ ನಿ ಪ । ಪ ಗಾ ರೀ ಸಾ ರಿ ॥
ಚಾ ಲ ಮ ರು ಲು ಕೊ ನ್ನ ದಿ ರಾ

### ಅನುಪಲ್ಲವಿ

॥ ಪ ಗ ರಿ ಸ ನಿ ಸ ರೀ ಗಾ ರಿ ರಿ ಸ ಸ ನಿ ಪ । ನಿ ಸ ರಿ ಗಾ ಸ ಗ ರಿ । ಗ ಪಾ ನಿ ಸಾ ; ॥
ಚಿ ಲಿ ಯ ನೆ ಲ ರಾ ವ ದೇ ವಿ ರಾ

॥ ರಿ ಸ ನಿ ಪ ನಿ ಸ ರಿ ಗ ಸ ರಿ ಗ ಪ ಗ ರಿ ಸ ನಿ । ರಿ ರೀ ಸ ನಿ ಪ ಪ ಗ । ರಿ ಸ ನಿ ಪ ನಿ ಸ ರಿ ॥
ಚಿ ಲು ವು ಡೈ ನ ಶ್ರೀ ವೆಂ ಕ ಟೇ ಶ

### ಚಿಟ್ಟೆಸ್ವರ

॥ ಗಾ ರಿ ಗ ರಿ ಸ ರೀ ನಿ ಸ ರಿ ಗ ರಿ ರಿ ಸ ನಿ । ರೀ ನಿ ಗ ರಿ ನಿ ಸ ರಿ । ಪ ನಿ ಸ ರಿ ಗಾ , ಪ ॥
॥ ಗ ರಿ ಸ ರೀ ಗ ಪ ನಿ ರಿ ಗ ಪ ನಿ ಸ ರಿ ಗ ಪ । ಪ ನಿ ಸ ರೀ ಗ ಪ ನಿ । ರಿ ಗ ಪ ನಿ ಸಾ , ರಿ ॥
॥ ರಿ ಸ ನಿ ಪಾ ನಿ ಗ ರೀ ಸ ನಿ ಪ ನಿ ಸ ರಿ ಗ । ಪಾ ನಿ ಸಾ ರಿ ಗ ರಿ । ಪ ನಿ ಸ ರಿ ಗ ರಿ ನಿ ರಿ ॥
॥ ಗ ಪ ಗ ರಿ ಸ ನಿ ಸ ರಿ ಸ ನಿ ಪ ಗ ರಿ ಗ ಪ ನಿ । ಗ ರೀ ಸ ನಿ ಪ ರಿ ಸಾ । , ನಿ ಪ ಗಾ ರಿ ಸ ರಿ ॥ ಜಲಜಾ

### ಚರಣ

॥ ನೀ ; ; ಸಾ ರೀ ಸ ನಿ ಪ ಪ ಗ ರಿ । ಗಾ , ಗ ರಿ ಸ ರೀ । ರಿ ಸ ನಿ ಸ ರಿ ಗಾ ಪ ॥
ನೀ ಸಾ ಟಿ ದೊ ರ ನೇ ಗಾ ನ

### ಎತ್ತುಗಡೆ ಸ್ವರ

1 ॥ ನೀ , ಪಾ , ಗಾ ; ರೀ ಸಾ ನೀ । ಧಾ , ರೀ , ನೀ । , ಸಾ ರೀ ಗಾ ಪ ॥ ನೀಸಾಟಿ

2 ॥ ನೀ ಪ ಗ ರಿ ಸ ರೀ ಗ ರಿ ಸ ನಿ̣ ಧಾ̣ ರಿ ನಿ̣ । ೯ ಗ ರಿ ನಿ̣ ಧ̣ ನಿ̣ ಸ ರಿ । ೯ ರಿ ಗ ನಿ̣ ಸ ರಿ ಗ ಪ ॥ನೀಸಾಟಿ

3 ॥ ನಿ ಪ ಗ ರಿ ನಿ̣ ಗ ರಿ ನಿ̣ ಧ̣ ನಿ̣ ಧ̣ ಸ ನಿ̣ ರಿ ಸ ಗ । ರಿ ಪ ಗ ನಿ ಪ ಸ̇ ನಿ ರಿ̇ । ನಿ ಗ̇ ರಿ̇ ನಿ ರಿ̇ ನಿ ಪ ಗ ॥
॥ ಪ ನಿ ಸ̇ ರಿ̇ ಗ ಗ ಪ ನಿ ಸ̇ ರಿ̇ ರಿ ಗ ಪ ನಿ ಸ̇ ನಿ । ಗ ರಿ̇ ಸ̇ ನಿ ಪ ರಿ̇ ಸ̇ ನಿ । ಪ ಗ ರಿ ನಿ̣ ಸ ರಿ ಗ ಪ ॥ನೀಸಾಟಿ

4 ॥ ಸಾ̇ ; ; ನಿ ರಿ̇ ಸ̇ ನಿ ಪ ಗ ರಿ ಸ ರಿ ಗ । ಪಾ ; ; ಸ̇ ನಿ । ಪ ಗ ರಿ ಸ ರಿ ಗ ಪ ನಿ ॥
॥ ಸ̇ ರೀ̇ ನಿ ರಿ̇ ನಿ ಪ ಗ ಪ ರೀ ಗ ಪ ಗ ರಿ ಸ । ರಿ ನೀ̣ ಗ ರಿ ಪ ಗ ನಿ । ರಿ ಗ ಪ ನಿ ಸಾ̇ ; ॥
॥ ನಿ ಪ ಗ ಪಾ ರಿ ಗ ಪ ನೀ ಗ ಪ ನಿ ಸ̇ ರೀ̇ । ಪ ನಿ ಸ̇ ರೀ̇ ಗ ನಿ ಸ̇ । ನಿ ಗ̇ ರಿ̇ ರಿ̇ ನೀ ಪ ನಿ ॥
॥ ಗ ರೀ ನಿ̣ ಸ ರಿ ಪ ಗಾ ರಿ̇ ಸ̇ ನಿ ಪ ನಿ̣ ಸ ರಿ̇ । ಸಾ̇ , ಪಾ , ನಿ ಪ । ಗ ರಿ ಸ ನಿ̣ ಸ ರಿ ಗ ಪ ॥ನೀಸಾಟಿ

* * *

೩

ರಾಗ : ಕಲ್ಯಾಣಿ ತಾಳ : ಆದಿ

## ಪಲ್ಲವಿ

॥ ಸ ಸಾ ಸ ನಿ ದ ರಿ ಸ ನಿ ನಿ ದ ದ ಪ ಮ ಗ ಮ । ಪ ದ ನಿ ದಾ ರಿ ಸ ನಿ । ದ ಪ ಮ ಗ ಮ ಪ ದ ನಿ ॥
ವ ನ ಜಾ ಕ್ಷಿ ರೊ ಈ ವಿ ರ ಹ ನೋ ರ್ವ ನೆ

॥ ಸ ರಿ ಗ ರಿ ಸ ನಿ ಸ ರಿ ಸ ನಿ ರಿ ಸ ನಿ ದ ನಿ ದ । ನೀ ; ; ಸ ನಿ । ದ ಪ ಮ ಗ ಮ ಪ ದ ನಿ ॥
ವಾ ಸು ದೇ ವು ನೀ ತೋ ಡಿ ತೇ ವೆ

## ಅನುಪಲ್ಲವಿ

॥ ಪಾ ಮ ಗ ನಿ ದಾ ಗ ದ ಪಾ ಮ ಗ ರಿ ಸ ನಿ । ಸ ರಿ ಗ ಮಾ , ಗ ಮ । ಪ ಗಾ ಮ ನಿ ದ ನಿ ಪ ॥
ವಿ ನ ವೇ ನಾ ಗ ಪು ರ ಮು ನ

॥ ದ ನಿ ಸ ರೀ ಸ ರಿ ಗ ಸ ರಿ ಗ ರಿ ಸ ನಿ ದ ನಿ । ದ ಗ ರಿ ಸ ನಿ ದ ಪ ನಿ । ದ ಪ ಮ ಗ ಮ ಪ ದ ನಿ ॥
ವೆ ಲ ಯು ಸೌ ದ ರ ರಾ ಜು ನು

## ಚಿಟ್ಟೆಸ್ವರ

॥ ಸ ರೀ ನಿ ಸ ನಿ ದ ನೀ ಸ ನಿ ದ ಪ ಮ ಗ ರಿ । ಸ ರಿ ಸ ಪಾ ಮ ದಾ । ಪ ನಿ ದ ರಿ ಸ ನಿ ದ ನಿ ॥
॥ ದ ಗ ರಿ ನೀ ರಿ ನೀ ಸ ದಾ ನಿ ಪ ದ ನಿ ಸ । ಗ ರಿ ಸೀ ನಿ ದ ಪಾ । ಮ ಗ ರಿ ಗ ಮ ಪ ದ ನಿ ॥ ವನಜಾ

## ಚರಣ

॥ ನೀ ; ; ಸ ದ ಸ ನಿ ದ ಪ ಮ ಗ ಮಾ । ಪಾ ; ; ; ; ಮ ಪ । ದ ನಿ ಪ ದ ನಿ ದ ರಿ ಸ ॥
ನಿ ಲು ಪ ರಾ ನಿ ನೋ ಹ ಮಾ ಯೆ

## ಎತ್ತುಗಡೆ ಸ್ವರ

1 ॥ ಪಾ ; ಮಾ ಗಾ ರೀ ದಾ ಮಾ ಗಾ । ರೀ ನೀ ಸಾ ರೀ । ಗಾ ಮಾ , ಪಾ ದ ॥ ನಿಲುಪ

2 ॥ ಪಾ ದ ಪಾ ಮ ಗ ಮ ಪಾ ಮ ಗಾ ರಿ ಸ ನ಼ಿ । ಸಾ ರಿ ನೀ ಸ ದ಼ ನ಼ಿ । ಸಾ ರಿ ಗಾ ಮ ಪ ದ ॥ ನಿಲುಪ

3 ನೀ ; ; ಸ̇ ರ̇ಿ ನಿ ಸ̇ ನಿ ದ ನಿ ದ ಪ ಮ । ಪಾ , ದ ನಿ ದ ಪ ದ । ಪ ಮ ಪ ಮ ಗ ಮ ಪ ದ ॥

॥ ನಿ ಸ̇ ನಿ ಗ̇ ರ̇ಿ ಗ̇ ಸ̇ ರ̇ಿ ನಿ ಸ̇ಾ ರ̇ಿ ಸ̇ ರ̇ಿ ಸ̇ ಸ̇ । ದ ನೀ ಸ̇ ನಿ ದ ಪ ಮ । ಗ ಮ ಪ ದಾ ನಿ ಗ̇ ರ̇ಿ ॥ ನಿಲುಪ

4 ॥ ರ̇ೀ ; ; ದ ಗ̇ ರ̇ಿ ಸ̇ ನಿ ಪ ದ ನಿ ಸ̇ ರ̇ಿ । ಸ̇ಾ ; ; ಸ̇ ನಿ । ದ ಪ ಮ ಗಾ ಮ ಪ ದ ॥

॥ ಮಾ ಪ ದ ನಿ . ಪಾ ದ ನಿ ಸ̇ ರ̇ೀ ಸ̇ ನಿ ದ ನಿ । ಸ̇ ನೀ ದ ಪ ಮ ಗ ಮ । ಪ ದ ಪ ನಿ ದಾ ; ॥

॥ ದ ನಿ ಸ̇ ರ̇ಿ ರ̇ಿ ಗ̇ ಗ̇ ಮ̇ ಗ̇ ರ̇ಿ ಸ̇ ನಿ ಸ̇ ರ̇ಿ ಸ̇ ನಿ । ದ ಸ̇ ನಿ ದ ಪ ನಿ ದ ಪ । ಮ ಗಾ ಮಾ ಪಾ ದ ॥ ನಿಲುಪ

* * *

## ೪

ರಾಗ : ಮೋಹನ    ತಾಳ : ಆದಿ    ರಾಮನಾಡ್ ಶ್ರೀನಿವಾಸಯ್ಯಂಗಾರ್

### ಪಲ್ಲವಿ

॥ ಗಾ ಗಾ ರೀ ರೀ ಸ ಸ ರಿ ರಿ ಗ ಗ ರಿ ರಿ । ಸ ರಿ ಗ ರಿ ಸ ರಿ ಸ ಧ಼ । ಸ ರಿ ಗ ಪ ಗ ರಿ ಸ ರಿ ॥
ನಿ ನ್ನು ಕೋ ರಿ ಯು ನ್ನಾ ನು ರ

॥ ಗ ಪ ಗ ಗ ರಿ ಸ ರಿ ಗ ರಿ ರಿ ಸ ಧ಼ ಸ ರಿ ಗ ರಿ । ಗ ಪ ಗ ಪ ದ ಪ ದ ಸ಼ । ದಾ ಪ ಗ ದ ಪ ಗ ರಿ ॥
ನಿ ಖಿ ಲ ಲೋ ಕ ನಾ ಯ ಕ

### ಅನುಪಲ್ಲವಿ

॥ ಗಾ ಗಾ ಪಾ ; ಗ ಗ ಪ ಪ ದ ದ ಪಾ । ದ ಸ಼ ದ ದ ಪ ಗ ದ ಪ । ದ ಗ ದ ಪ ಗ ರಿ ಸ ರಿ ॥
ನ ನ್ನು ಪಾ ಲಿಂ ಪ ಸ ಮ ಯ ಮು ರ

॥ ಗ ಗ ಪ ಪ ದ ಪ ದ ಸ಼ ದ ಸ಼ ರಿ಼ ಸ಼ ಗ ರೀ಼ ಸ಼ । ದ ಸ಼ ರಿ಼ ಸಾ಼ ದ ಪ ದ । ಸ಼ ದಾ ಪ ಗ ರಿ ಸ ರಿ ॥
ನಾ ಮಾ ದ ಕೃ ಪ ಜೂ ಡ ರ

### ಚಿಟ್ಟೆಸ್ವರ

॥ ಗಾ ರಿ ಗ ರಿ ಸ ರೀ ಸ ರಿ ಸ ಗ ರಿ ಗ ಸ ರಿ । ಸ ಧ಼ ಸ ರಿ ಗ ರಿ ಗ ಪ । ಗ ಪ ದಾ ಪಾ ; ॥
॥ ಗ ಪ ದ ಪ ದ ಸ಼ ರಿ಼ ಗ ರೀ಼ ಗ ಸಾ಼ ರಿ಼ ದಾ । ಸ಼ ಪಾ ದ ಸ಼ ರಿ಼ ಗ ಸ಼ । , ದ ಪಾ ಗ ರಿ ಸ ರಿ ॥ ನಿನ್ನು

### ಚರಣ

॥ ಗಾ ಗಾ ಗಾ ; ರಿ ಗ ಪ ಗ ಪಾ ; । ಪ ಗ ದಾ ಪಾ ಪ ಗ । ದ ಪ ಗ ಪ ಗ ರಿ ಸ ರಿ ॥
ಸ ನ್ನು ತಾಂ ಗ ಶ್ರೀ ನಿ ವಾ ಸ ॥

### ಎತ್ತುಗಡೆ ಸ್ವರ

1 ॥ ಗಾ ; ರೀ ಸಾ ರೀ ; ದಾ ; । ರೀ ದಾ ಸಾ ; । ರೀ ; ಗಾ ರೀ ॥ ಸನ್ನು

2 ॥ ಗಾಗ ರಿಗರಿಸರಿಗಾಗ ಪ̣ಧ̣ಧ̣ಸರಿ । ಗಾಗ ಗದಪಗರಿ । ಗಾಗ ಸ̇ದಪಗರಿ ॥ ಸನ್ನು

3 ॥ ಪಾ ದದಪಾ ಗರಿಸಾ ರಿಗರೀ ಸಧ̣ । ಸಾ ರಿಗ ಪಾ ದಾ । ಸ̇ಸಾ̇ ದಪಾಗರಿ ॥ ಸನ್ನು

4 ॥ ಸಾ̇ರಿ̇ಗರಿ̇ಸ̇ರಿ̇ಸ̇ ದಸ̇ದಪ ಗರಿಸರಿ । ಸಾ ; ; ಸಸ । ರಿರಿ ಗಗಪಪದದ ॥
॥ ಸ̇ರಿ̇ಗರಿ̇ಗರಿ̇ ದಸ̇ರಿ̇ಸ̇ರಿ̇ಸ̇ ಪದಸ̇ದ । ಸ̇ದ ಗಪದಪದಪ । ರಿ̇ಸ̇ದಪ ಗರಿಸರಿ ॥ ಸನ್ನು

* * *

೪

ರಾಗ : ಕಾಂಭೋಜಿ ತಾಳ : ಅಟ್ಟ ವಡಿವೇಲು

ಪಲ್ಲವಿ॥ ಸಾ ನಿ ಪ ಧ ಸ ರಿ ಗ ಮಾ ಗಾ ಸಾ , ನಿ ಪಾ ಧಾ ।
ಆ ಸ ರ ಸಿ ಜ

॥ ಸಾ ; ; ; ಸ ರಿ ಗ ರಿ ರಿ ಗ ರಿ ರಿ ಸ ನಿ ಧ ಪ । ಮ ಗ ಪ ಧ ಸ ಪ ಧ ಸ । ರಿ ಗ ಸ ರಿ ಗ ಮ ಗ ಗ ॥
ನಾ ಭ ನಿ ನ್ನು ಸ ನ್ನು ತಿ ಜೇ ಸೇ

॥ ರಿ ಸ ನಿ ಪ ಧ ಸ ರಿ ಗ ಮ ಮ ಗ ಗ ರಿ ರಿ ಸ ಸ ನಿ ಪ ಧ ಸ ।
ನು ರಾ ಚಾ ಲ

॥ , ಮ ಗ ಮ ಪ ಸ ರಿ ಸ ಮ ಮ ಗ ಸ ಸ ದ ಪ ಮ ಗ ಸ ಸ ಸ । ನಿ ದ ಪ ಪ ದ ರಿ ಸ ನಿ । ದ ದ ಪ ಮ ಗ ಗ ರಿ ಸ ॥
ಕೃ ಪ ಯುಂ ಚು ಟ ಕಿ ದಿ ಸ ಮ ಯ

ಅ.ಹ. ॥ ರಿ ಸ ನಿ ಪ ಧ ಸ ರಿ ಗ ನೀ ದಾ ಪ ಮ ದ ಪ ಮ ಗ ಮಾ ।
ಮು ರಾ ನಿ ರ ತ ಮು ನೀ

॥ ಪಾ ; ; ; ಪ ಪ ದ ದ ದ ನಿ ನಿ ದ ದ ಪ ಪ ಮ ಗ । ಮ ಪ ಮ ಪ ದ ಪ ದ ಸ । ದ ರಿ ಸ ನಿ ಪಾ ದಾ ॥
ಪಾ ದ ಮೆ ಗ ತಿ ಯ ನಿ ಯು ನ್ನ

॥ ಸಾ ; ; ; ನಿ ದ ಸ ಸ ರಿ ರಿ ಗ ಗ ಮ ಮ ಗ ಗ ।
ರಾ ನಿ ಜ

॥ ರಿ ರಿ ಸ ಸ ನಿ ದ ಪ ಮ ಪ ದ ಸ ರಿ ಗ ಸಾ ನಿ ದ ಮ ಪ ದ । ಪಾ ಮ ಗ ರಿ ಸಾ ರಿ । ಸ ನಿ ದ ದ ಪ ಮ ಗ ಗ ॥
ಮ ನಿ ಯೆಂ ಚಿ ನಿ ಮ ನ ವಿ ಗ್ರೈ

ಚಿ.ಸ್ವ.॥ ರಿ ಸ ನಿ ಪ ಧ ಸ ರಿ ಗ ಗಾ , ಮ ಗ ಗ ರಿ ರಿ ಸಾ , ರಿ ।
ಕೊ ರ

॥ ಗ ಸ ರಿ ಸ ನಿ ಧ ಪ ಧ ಸಾ ಸ ಪ ಧ ಸ ರೀ ರಿ ಧ ಸ ರಿ । ಗಾ ಗ ಸ ರಿ ಗ ರೀ । ರಿ ಧ ಸ ರಿ ಸಾ ಸ ಮ ॥

॥ ಗ ರಿ ಸ ನಿ ಪ ಧ ಸ ರಿ ಗ ಮ ಗ ರಿ ಸ ಪ ಮ ಗ ರಿ ಸ ದ ಪ ।

॥ ಮ ಗ ನಿ ದ ಪ ಸ ನಿ ದ ರಿ ಸ ಗ ರಿ ಮ ಗ ರಿ ಗ ಸ ರಿ ದ ರಿ । ಸಾ , ನಿ ದ ಮ ಪ ದ । ಪಾ , ಮ ಗ ರಿ ಸ ರಿ ॥

॥ ಸಾ ನಿ ಪ ಧ ಸ ರಿ ಗ (ಸರಸಿಜನಾಭ)

ಚರಣ

॥ * * * * * * * * ಸ̇ಾ, ರ̇ಿ ಸ̇ ನಿ ದ ದ ಪ ಮ ಗ ರಿ ।
ಸಾ ರ್ವ ಭೌ

॥ ಸಾ ; ; ಸ ನ̣ಿ ಪ̣ ಧ̣ ಸ ರಿ ಗಾ ಸ ರಿ ಗ ಮ ಪಾ । ಮ ಗ ಪ ದ ಸ̇ಾ ಪ ದ । ರ̇ಿ ಸ̇ಾ ನಿ ದ ದ ಪ ಮ ॥
ಮ ಸ ಕ ಲ ಲೋ ಕಾ ಭಿ

॥ ಗ ರಿ ಸ ಮ ಗ ಮ ಪ ದ
ರಾ ಮ

1 ॥ ಸ̇ಾ ; ; ನೀ ; ದಾ ; ಪಾ ; ದಾ ।
॥ ಮಾ ಗಾ ರೀ ಗಾ ಸಾ ; ; ರೀ ಸಾ ನ̣ೀ । ಪ̣ಾ , ಧ̣ಾ , ಸಾ । ; ರೀ ; ಗಾ ॥
॥ ; ಮಾ , ಪಾ ದ (ಸಾರ್ವಭೌಮ)

2 ॥ ರೀ ; ; ರೀ ಗ ರಿ ರಿ ಗ ರಿ ರೀ ಸ ನ̣ಿ ಧ̣ ಪ̣ ಧ̣ ।
॥ ಸಾ ; ; ಪ̣ ಧ̣ ಸ ರಿ ಗ ಸಾ ರಿ ಗ ಮ ಪ ಸಾ ರಿ । ಗ ಮ ಪ ದ ಸ̇ಾ ನಿ ದ । ಮಾ ಗ ಸಾ ಪ̣ ಧ̣ಾ ॥
॥ ಸಾ , ರಿ ಗ ಮ ಪ ದ (ಸಾರ್ವಭೌಮ)

3 ॥ ಮಾ ; ; ಪ ದ ಮಾ ಪ ದ ನಿ ದ ಮಾ ಪ ಸ̇ ನಿ ದ ।
॥ ಮಾ ದ ಮಾ ಪ ಗ ಮ ಪಾ ; ; ನಿ ದ ಪ ಮ ಗ ರಿ । ಗ ಸಾ ರಿ ಸ ನ̣ಿ ಪ̣ಾ । ಧ̣ ಸಾ ರಿ ಗ ಮ ರಿ ಗ ॥
॥ ಮ ಗ ಮ ರಿ ಗ ಸ ಪ ಮ ಪ ಗ ಮ ಗ ನಿ ದ ನಿ ಪ ದ ಪ ಸ̇ ನಿ ।
॥ ದ ರ̇ಿ ಸ̇ ಗ̇ ರ̇ಿ ಸ̇ ನಿ ದ ಪ ದ ಸ̇ ರ̇ಿ ಗ̇ ಮ̇ ಗ̇ ಸ̇ಾ ನಿ ದ ಮ । ಪ ದ ಸ̇ ಗ ಪ ದ ಸ̇ ಸ । ರಿ ಗ ಮ ಪ ನ̣ಿ ಧ̣ ಸ ರಿ ॥
॥ ಗ ಮಾ ಪ ದ ಸ̇ ರ̇ಿ ಗ̇ (ಸಾರ್ವಭೌಮ)

4 ॥ ಸ̇ಾ ; ; ರ̇ಿ ಗ̇ ರ̇ಿ ಸ̇ ನಿ ದ ಪಾ ಮ ಗ ರಿ ಸಾ ನ̣ಿ ಪ̣ ಧ̣ ।
॥ ಸಾ ; ; ಸ ನ̣ಿ ಪ̣ಾ ಧ̣ ಪ̣ ಧ̣ಾ ಸ ಧ̣ ಸಾ ರಿ ಸ । ರೀ ಗ ರಿ ಗಾ ಮ ಗ । ಮಾ ಪ ಮ ಪಾ ದ ರ̇ಿ ॥
॥ ಸ̇ ರ̇ಿ ಸ̇ ನಿ ದ ಪ ಮ ಪ ದ ಸ̇ ನಿ ದ ಪ ಮ ಗ ರಿ ಸ ರಿ ಗ ರಿ ।
॥ ಸ ರಿ ಸ ನ̣ಿ ಪ̣ ಧ̣ ಪ̣ ಧ̣ ಸ ರಿ ಸ ರಿ ಸ ರಿ ಗ ರಿ ಗ ಮ ಗ ಮ । ಪ ಮ ಪ ದ ಪ ದ ರ̇ಿ ಸ̇ । ನಿ ದ ಪ ದ ಸ̇ಾ ; ॥
॥ ಸ ರಿ ಗ ಮ ಪ ದ ಮ ಗ ಪ ದ ಸ̇ ನಿ ಪ ದ ಸ̇ ರ̇ಿ ಗ̇ ರ̇ಿ ಗ̇ ಮ̇ ।
॥ ಗ̇ ರ̇ಿ ಸ̇ ನಿ ದ ಪ ಮ ಗ ಪ ದ ಸ̇ ರ̇ಿ ಗ̇ ಮ̇ ಗ̇ ರ̇ಿ ಸ̇ಾ ; । ಪ ಸ̇ ನಿ ದ ಪ ಮ ಗ ರಿ । ಸಾ , ನ̣ಿ ಪ̣ ಧ̣ ಸ ರಿ ॥
॥ ಸ ರಿ ಗ ಮ ಗ ಮ ಪ ದ (ಸಾರ್ವಭೌಮ)

* * *

೫

ರಾಗ : ಕಲ್ಯಾಣಿ　　ತಾಳ : ಅಟ್ಟ　　ಪಲ್ಲವಿ ಗೋಪಾಲಯ್ಯರ್

ಪಲ್ಲವಿ ॥ ಸಾ ನಿ ಧ ನಿ ಸ ರಿ ಗ ದಾ ಪಾ ಗಾ , ರಿ ರೀ ; ।
ಆ ವ ನ ಜಾ

॥ ಗ ಪ ಮ ಗ ರಿ ಸ ನಿ ಧ ರಿ ರಿ ಸಾ ರಿ ಧ ಗ ರಿ ಗ ಪ ಮ ರಿ । ಗ ಮ ಪ ದ ಪ ಮ ನಿ ದ । ನಿ ಪಾ ಮ ಗ ದ ಮ ಗ ॥
ಕ್ಷಿ ನಿ ನ್ನೆ ಕೋ ರಿ

॥ ರಿ ಸ ನಿ ಧ ನಿ ಸ ರಿ ಗ ದ ಪ ಮ ರಿ ಗ ಮ ಪ ದ ಪ ಮ ನಿ ದ ।
ವ ಲ

॥ ನಿ ಪ ಮ ಗ ಮ ಪ ದ ನಿ ಸ ನಿ ನಿ ದ ಪ ನಿ ದ ಪ ಮ ಗ ದ ಮ । ಗ ರಿ ಸ ನಿ ಧ ಗ ರಿ ಪ । ಮ ಗ ರಿ ಸ ನಿ ಧ ರಿ ಸ ॥
ಚಿ ವ ಚ್ಚಿ ಯು ನ್ನ ದಿ

ಅ.ಪ. ॥ ರೀ , ಧ ನಿ ಸ ರಿ ಗ ಮ ಪ ನಿ ದ ಪ ಮ ಪ ದ ಪ ಮ ಮ ಗ ।
ರಾ ಮ ನ ಸಿ

॥ ನಿ ದ ಗ ಮ ಪ ಗ ರಿ ಸ ನಿ ದ ಮ ಗ ರಿ ಪ ಮ ಗ ರಿ ಸ ನಿ ರಿ । ಧ ನಿ ಸ ರಿ ನಿ ಸ ರಿ ಗ । ಪ ಮ ಗ ಮ ಪ ದ ದ ನಿ ॥
ಜು ನಿ ಕ ನ್ನ ಚ ಕ್ಕ ನಿ

॥ ಪ ದ ನಿ ಸ ದ ನಿ ಪಾ ನಿ ದ ಸ ನಿ ಸ ದ ನಿ ಸ ರಿ ಸ ಗ ರಿ ।
ಶ್ರೀ ಮಾ ಕ

॥ ಮ ಗ ರಿ ಸ ನಿ ದ ನಿ ಸ ಗ ರಿ ಸ ಸ ನಿ ನಿ ದ ಪ ಗ ಗ ದ ದ । ನಿ ನಿ ಸ ಸಾ ರಿ ನಿ ದ । ನಿ ದ ಮ ಗ ನಿ ದ ಮ ಗ ॥
ಸ್ತೂ ರಿ ರಂ ಗ ಸಾ

ಚಿ.ಸ್ವ.॥ ರಿ ಸ ನಿ ಧ ನಿ ಸ ರಿ ಗ ಮಾ , ಗ ಪ ಮ ಪಾ ದ ಗ ಮ ಪ ।
ಮಿ

॥ ನಿ ದ ಪ ನಿ ದಾ ಪ ಮ ದ ಮ ಗ ರೀ ಪ ಮ ಗ ರಿ ಸ ನಿ ಧ । ರಿ ನಿ ಧ ಗ ರಿ ಪ ಮ ಗ । ಮ ರಿ ಗ ನಿ ದಾ ಸ ನಿ ॥
॥ ನಿ ದ ಪ ಮ ಗ ಮ ಪ ದ ನಿ ಪಾ ದ ಪ ನಿ ದ ಸ ನಿ ರಿ ದ ಗ ।
॥ ರಿ ಮ ಗ ರಿ ಸ ನಿ ದ ರಿ ಸಾ ನಿ ದ ಸ ನಿ ದ ಪ ನಿ ದ ಪ ದ । ಮ ಪ ಗಾ , ರಿ ರಿ ಸ । ಸಾ , ರಿ ನಿ ದ ಮ ಗ ॥
॥ ರಿ ಸ ನಿ ಧ ನಿ ಸ ರಿ ಗ (ವನಜಾಕ್ಷಿ)

ಚರಣ

॥ * * * * * * * * ಸ ನಿ ದ ಪ ಮ ಗ ಮ ರಿ ಗ ಮ ಪ ದ ।
ಚಿ ರು ನೌ

॥ ಪಾ , ಗ ಮ ಪ ದ ಪ ಮ ಪ ದ ದ ದ ನಿ ನಿ ಸ ಸ ನಿ ನಿ ದ ಪ । ಮ ಪ ದ ನಿ ಪಾ ದ ನಿ । ಸ ದ ನೀ ಸಾ ಸ ನಿ ॥
ಮೋ ಮು ನ

॥ ದ ಪ ಮ ಗ ಮ ಪ ದ ನಿ
. . . . . . . . . .

1 ॥ ರೀ ; ; ಸಾ ; ರೀ ಸಾ ನೀ ದಾ ನೀ ।
॥ ಪಾ ; ; ಮಾ ದಾ ಮಾ ಗಾ ರೀ ; ನೀ । ಸಾ ರೀ ಗಾ ಸಾ । ರೀ ಗಾ ಮಾ ಗಾ ॥
॥ ಮಾ ಪಾ ದಾ ನೀ (ಚಿರುನೌ)

2 ॥ ದಾ ಪ ಮ ಪ ಗ ಮಾ ಪ ಗ ದ ಮ ಗ ರಿ ಪ ಮಾ ಗ ರಿ ನಿ ।
॥ ಸ ರಿ ಗ ಪ ಮ ಗ ರಿ ನಿ ರೀ ರಿ ಧ ಗ ರಿ ಪ ಮ ಮ ಗ ನಿ ದ । ದ ಗ ರಿ ನಿ ದ ದ ನಿ ದ ।ಮ ಗ ದ ಮ ಗ ರಿ ಸ ಸ ॥
॥ ನಿ ದ ನೀ ಪ ದ ನಿ (ಚಿರುನೌ)

3 ॥ ಮ ನಿ ದ ಮ ಪ ಗ ಪ ಮ ಪಾ , ಮ ಗ ದ ಮ ಗ ರಿ ಸ ನಿ ರಿ ।
॥ ರಿ ಧ ನಿ ಸ ರೀ ರಿ ದ ಪ ಮ ಗ ರಿ ನಿ ದ ಪ ಮ ಗ ಮ ಪ । ದ ದ ನಿ ನಿ ಸ ದ ಗ ರಿ । ಸ ನಿ ದ ರಿ ನಿ ದ ಪ ಮ ॥
॥ ಗ ನಿ ದ ಗ ಮ ಪ ದ ನಿ (ಚಿರುನೌ)

4 ॥ ದಾ ನಿ ದ ಮ ಗ ದ ಮ ಗ ರೀ ಮ ಗ ರಿ ನಿ ಧಾ ಗ ರಿ ಮ ।
॥ ಗ ನಿ ದ ಗ ಮ ಪ ದ ನಿ ಪ ದ ಮ ಗ ದ ಗ ಮ ಪ ನಿ ದ ಸ ನಿ । ಸ ದ ನಿ ರಿ ನಿ ದ ಮ ದ । ಮ ಗ ರಿ ನಿ ರಿ ನಿ ಸ ಧ ॥
॥ ನಿ ಸ ರಿ ಗ ಮ ಪ ದ ನಿ (ಚಿರುನೌ)

5 ॥ ಪ ಮ ಗಾ ಗ ರಿ ರಿ ಸ ರೀ ರಿ ನಿ ಸ ರಿ ನಿ ದ ಪ ಮ ಗ ರಿ ।
॥ ಸಾ , ಧ ಗ ರಿ ನಿ ಧ ರೀ ರಿ ಧ ರೀ ರಿ ಧ ಗ ರಿ ಪ ಮ । ಮಾ ಪ ಗ ರಿ ನಿ ದ ಗ । ಮ ಪ ದ ನಿ ಸಾ , ರಿ ॥
॥ ಗ ಮ ರೀ ಗ ಮ ಪ ದ ಗಾ ಮ ಪ ದ ನಿ ಪಾ ದ ಮ ಪ ದ ।
॥ ನಿ ಸಾ ದ ಗ ರಿ ನಿ ದ ಗ ರಿ ಮ ಗ ರಿ ಸ ಗ ರಿ ಸ ನಿ ಸ ರಿ । ನಿ ದ ರಿ ನಿ ಸ ದ ನಿ ಪ । ದ ಮ ಗ ರಿ ನೀ ದ ದ ॥
॥ ಮಾ ಗ ಮಾ ಪ ದ ನಿ (ಚಿರುನೌ)

* * *

## ಪದವರ್ಣ

ರಾಗ : ಶಂಕರಾಭರಣ ತಾಳ : ಆದಿ

ತಂಜಾವೂರು ಪೊನ್ನಯ್ಯ

### ಪಲ್ಲವಿ

॥ ; ; ಸಾ ಪಾ ಮ ಗ ಮ ರಿ ಗಾ ಮಾ । ಪಾ ಪಮಗಾ ಮಾ ಪಾ । ; ; ಮ ದ ಪ ಮ ॥
ಮ ನ ವಿ ಚೇ ಕೊ ನ

॥ ಗ ರಿ ಸ ನಿ ಸಾ ಪಾ,ಮ ಗಮಪಮಮಗಗರಿ ಗಾ ಮಾ । ಪಾ ಪಮಗಾ ಮಪದಾ ಪಾ । ; ; ಸಾ ಸನಿನೀ ॥
ಮ ನ ವಿ ಚೇ ಕೊ ನ ರಾ

॥ ಸಾ , ನಿ ದ ರಿ ಸಾ,ನಿದಪಾ, , ಮ ಪಾ ದ ನಿ । ಸಾ ; ಸಾ ದನಿಸನಿ । ದಪಾ, ಮ ಗ ರಿ ಪ ಮ ಗ ॥
ದಾ ಚ ಕ್ಕ ನಿ ಸಾ

॥ ಗ ರಿ ಸ ನಿ । । ; ; ಸಾ ಸನಿನೀ ॥
ಮನವಿ ಚೇ ಕೊ ನ ರಾ

॥ ನಿಸರೀನಿಸಾ, ದ ರಿ ಸ ನಿ ದಪಾ, , ಮ ಪಾ ದ ನಿ । ಸಾ ; ಸಾ ದನಿಸನಿ । ದಪಾ,ಮಗ ರಿಗಮಪದಪಮಗ॥
ದಾ ಚ ಕ್ಕ ನಿ ಸಾ ಮಿ

॥ ರಿ ೯ ಸಾ ಸಾ ಮ ಗ ಸಾ ; ಸಾ ಸ ನಿ । ಸಾ , ರಿ ಗ ರಿ ಗಾ ; । ; ಗ ರಿ ಗಾ,ಮಪಾ,ಗ ॥
ಮ ಮ ತ ಮಿಾ ರಿ ಯು ನ್ನಾ ನು

॥ ರಿ ೯ ಸಾ
ರಾ (ಮನವಿ)

### ಅನುಪಲ್ಲವಿ

॥ ; ; ಸಾ ಸ ನಿ ದ ಪಾ ಮ ಗಾಮಪ ಗ ಮ । ೯ ರಿ ಗ ಮ ಗಮಪಾ ಪಾ । ; ಸದನೀ ಸಾ ; ॥
ವಿ ನ ರಾ ಶ್ರೀ ತಂ ಜಾ ಪು ರಿ ನಿ

॥ ,ಗಮಪದನಿ ಸರಿಗರಿಸನಿದಾಪಾ,ಮಗಮಪಮಮಗಗರಿ। ಗ ಮ ಗಮಪಾ ; ಪಾ । ॥
ವಿ ನ ರಾ ಶ್ರೀ ತಂ ಜಾ ಪು ರಿ ನಿ

॥ ; ; ಸಾ ಸ ನಿ ಸಾ,ರಿ ಗ ರಿ ರಿ ಸ ರಿ ೯ । ; ಸಾ ರಿ ಗ ರಿ ಸ । ಸ ನಿ ಸ ದ ನಿ ಪ ದ ರಿ ॥
ವೆ ಲ ಯು ಮಾ ಬೃ ಹ ದೀ

॥ ಸಾ ; ಸಾ ಸ ನಿ ಸಾ,ರಿ ಗ ರಿ ರಿ ಸ ರಿ । , ಸ ಸಾ ರಿ ಗ ರಿ ಸ । ಸ ನಿ ಸ ದ ನಿ ಪ ದ ರಿ ॥
ಶ ನಿ ನ್ನ ನೆ ರ ನ ವ್ಮಿ ಯು ನ್ನಾ ನು

॥ ಸಾ , ಸ ಸಾ , ನಿ ದ ರಿ ಸಾ,ನಿ ದಾ ಪಾ । ಸಾ ದನಿಸನಿದಾಪಾ ಮ ಗ । ರಿ ಪ ಮ ಗ ರಿ ಸಾ ॥
ರಾ ನಿ ಕ್ಕ ಮು ಗ ಮ ದಿ ಲೋ ನ

॥ । । ಗ ಮ ಪ ಗ ಮ ರಿ ಗ ಮ ॥
ನಿ ಕ್ಕ ಮು ಗ ಮ ದಿ ಲೋ ನ

ಮುಕ್ತಾಯಿ ಸ್ವರ:

॥ ಪಾ , ದ ಪ ಮ ಗ ರಿ ಗಾ , ಮ ಪ ಮ ಗ ರಿ । ಸಾ , ಸ ನಿ ಪ ಧ ನಿ । ಸ ರಿ ಗ ಮ ಪಾ ; ॥
ನೀ ನೆ ರ ತ ನ ಮು ನೀ ದೊ ರ ತ ನ ಮು ನೀ ಕೆ ತ ಗು ನ ನಿ ನೆ ದ ಲೆಂ ಚ ಗಾ

॥ ಮ ಗ ರಿ ಸಾ ಸ ರಿ ಗ ಮ ಪಾ ಗ ಮ ಪ ದ ನಿ । ಸಾ , ದ ಪ ಮ ಪಾ । , ಮ ಗ ರಿ ಸಾ , ಸ ॥
ಅ ಪು ಡು ನಾ ಮತಿ ಭ್ರಮ ಸಿ ಕ ಲ ಯು ಟ ಕು ಸಾ ಹ ಸ ಮು ಸೇ ಯ ತ ಗು ನಾ ಈ

॥ ನಿ ಪ ಧ ನಿ
ವೇ ಳ ಲೊ (ಮನವಿ)

ಚರಣ

॥ ಪಾ ; ; ಪಮಗಾ ಮಾ ಪಾ ; ಪ ಮ । ಪಾ ಸ ನಿ ದ ಪಾ ಮ । ಗ ಮ ಪ ಗ ಮ ರಿ ಗ ಮ ॥
ಪಂ ತ ಮೋ ಲ ರಾ ನಾ ತೊ

ಎತ್ತುಗಡೆ ಸ್ವರ :

1 ॥ ಪಾ , ದಾ , ಮಾ ; ಪಾ ಗಾ ಮಾ । ; ರೀ ಗಾ ಸಾ । ; ರೀ ಗಾ ಮಾ ॥
ಸಾ ಮಿ ನೀ ಸಾ ಟಿ ದೊ ರ ನೇ ಗಾ ನ ನು ರ
(ಪಂತ)

2 ॥ ಪಾ ದ ಪ ಮ ಪ ಗ ಮ ಪಾ ಮ ಗ ರಿ ಸ ನಿ ಧ । ಪಾ ಧ ನಿ ಸ ರಿ ಗ ಮ । ಪಾ ಸ ದ ಪ ಮ ಗ ಮ ॥
ಪಂ ಚ ಶ ರು ಡು ವಿ ಲು ವಂ ಚಿ ವಿ ರಿ ಶ ರ ಮು ಲಿ ಜ್ಚಿ ನು ರಾಯಿಕೆ ನು ವಂ ಚ ನ ತ ಗ ದುರ
(ಪಂತ)

3 ॥ ದ ಪಾ ಮ ಪ ಗ ಮ ಪ ದ ಪಾ ಮ ಗ ರಿ ಸ ನಿ । ದ ಪಾ ಮ ಗ ಮ ಪ ಮ । ದ ಪಾ ಸ ನಿ ದ ಪ ಮ ।
ಧ ರಾ ಧಿ ಪ ತಿ ಯ ನಿ ದೊರಾ ದೊ ರ ಲುಪೊಗ ಡಿ ರಾ ಕ ವಿ ಜ ನು ಲು ತ ರಾ ತ ರ ಮೆ ರಿ ಗಿ

॥ ದ ಪಾ ಸ ರಿ ಗ ಸ ನಿ ದ ಪಾ ಸ ನಿ ರಿ ಸ ನಿ । ದ ಪಾ ಸ ನಿ ದ ಪ ಮ । ದ ಪಾ ಮ ಗ ರಿ ಗ ಮ ॥
ಧೀ ರಾ ಕ ಲುಷ ಮೋಲ ಧೀರಾ ನಾಪ್ತೈಕೃಪ ಜೂ ಡ ರಾ ಮರು ಲು ಮಿಂಚಿ ನು ರಾ ನ ನುಜೇಕೊರ
(ಪಂತ)

4 ॥ ಸಾ ; ; ರಿ ಸ ನಿ ದ ಸ ನಿ ದ ಪ ಮ ಗ । ಮ ಪಾ ದ ಪ ಸ ನಿ ದ । ಪ ಮ ಗ ಮಾ ಪ ದ ನಿ ॥
ವೇ ಮರು ಚಿ ಲು ಕ ಲ ಕ ಲ ಕ ಲ ಮ ನಿ ಪ ಲು ಕ ಗ ನೇ ಡುತಾ ಳು ದು ನೀ

॥ ಪ ಪಾ ಪ ದ ದಾ ದ ನಿ ನೀ ನಿ ಸ ಸಾ ಸ । ರಿ ರೀ ರಿ ಗ ಗಾ ಸ । ರಿ ಸಾ ನಿ ದಾ , ನಿ ॥
ಏ ಲ ಈ ವೇಳ ನ ನ್ನೇಲ ಜಾ ಗೇಲ ಶ್ರೀ ಲೋಲ ನೀ ಕೇ ಮ ದಿ ರ ಗಾ ದು ರಾ ಕೋ

॥ ಸಾ,ಗ ರಿ ಸ ನೀ , ಸ ರೀ,ಸ ನಿ ದ ಪಾ , ದ । ನೀ,ದಪಾ,ಮ ಗಾ ಗ ಮ । ಪಾ,ಮ ಗ ರಿ ಸಾ , ನಿ ॥
ಟಿ ಮನ್ಮ ಥಾ ಕಾ ರ ನೀ ಸ ರಿ ಸಾ ಟಿಲೇ ದ ನಿ ಮಂಚಿ ಪಾ ಟ ಪಾಡುಚು ಸಾ

॥ ಸಾ,ಗರಿ ಮ ಗಾ,ಪ ಮದ ಪಾ,ಸ ನಿ ರಿ ಸಾ,ಗ ರೀ, ಗ । ಸ ರಿ ನಿ ರಿ ಸ ನಿ ದ ಪ । ಮಾ,ದ ಪ ಮಗ ರಿ ಗಮ ॥
ರಸಾಕ್ಷ ನೀ ಕೃ ಪ ನುನಾ ಪೈಲೇಕನ್ಯಾಯಮೇಮಿ ಈ ವ ಗ ಲು ಚಾಲುಚಾಲು ಯೀ ಲ ರಾನೀಕುಮ್ರೊಕ್ಕೆದ
(ಪಂತ)

* * *

## ಕೃತಿಗಳು

### ೧

ರಾಗ : ತೋಡಿ        ತಾಳ : ಆದಿ        ಪಲ್ಲವಿ ಗೋಪಾಲಯ್ಯ

ಪಲ್ಲವಿ : ಅಂಬ ನಾದು ವಿನ್ನಪಮು ವಿನಿ ನನ್ನಾದರಿಂಚುಟಕಿದಿ ಸಮಯಮಮ್ಮ

ಅನುಪಲ್ಲವಿ : ಅಂಬುಜ ಪಾಣಿ ವಾಣಿ ಮರಕತಾಂಗಿ ಮಾತಂಗಿ ಮಧುರ ಭಾಷಿಣಿ
ಶಾಂಭವಿ ಶಶಾಂಕವದನೆ ಶಿವಶಂಕರಿ ತ್ರಿಭುವನ ಸುಂದರಿ ತ್ರಿಜಗ (ದಂಬ)

ಚರಣ : 1. ವಾರಾಹಿ ವೈಷ್ಣವಿ ಸುಮಂಗಲಿ ವಾಮಿನಿ ನಿಗಮಾಗಮ ಸಂಚಾರಿಣಿ
ಶ್ರೀ ರಾಜರಾಜೇಶ್ವರಿ ವಿಮಲ ಚಿನ್ಮಯಾನಂದದಾಯಿನಿ ತ್ರಿಜಗ (ದಂಬ)

2. ಶೂಲಿನಿ ಪುರಾಣಿ ತ್ರಿತಾಪಶಮನಿ ಸೋಮಸೂರ್ಯಾಗ್ನಿಲೋಚನಿ ವರಕೃಪಾವನಿ
ನತಜನ ಭಯವಿದಾರಿಣಿ ಪ್ರಣವಪಂಜರ ತನುವಾಸಿನಿ ಜಗ (ದಂಬ)

3. ಭಂಡ ಮಹಿಷಾದಿ ದಾನವ ಮದ ವಿಭಂಜನಿ ನಿರಂಜನಿ ಮನೋನ್ಮನಿ
ಪಾಂಡವ ಸಹಾಯುಡೈನ ವೆಂಕಟಪತಿ ಸಹೋದರಿ ತ್ರಿಕೂಟವಾಸಿನಿ (ಅಂಬ)

**ಪ್ರತಿಪದಾರ್ಥ :** ಅಂಬ–ಅಮ್ಮ ; ನಾದು–ನನ್ನ ; ವಿನ್ನಪಮು–ಬಿನ್ನಹವನ್ನು, ಮೊರೆಯನ್ನು ; ವಿನಿ–ಕೇಳಿ ; ನನ್ನು–ನನ್ನನ್ನು ; ಆದರಿಂಚುಟಕು–ಆದರಿಸಲು, ಸಲಹಲು, ಕಾಪಾಡಲು ; ಇದಿ–ಇದು ; ಸಮಯಮು–ಸಮಯವಾಗಿದೆ ; ಅಂಬುಜಪಾಣಿ–ತಾವರೆಯನ್ನು ಕೈಯಲ್ಲಿ ಹಿಡಿದವಳೆ ; ವಾಣಿ–ಸರಸ್ವತಿಯೆ ; ಮರಕತಾಂಗಿ–ಪಚ್ಚೆಯ ಮೈಬಣ್ಣವುಳ್ಳವಳೆ ; ಮಾತಂಗಿ–ಲಕ್ಷ್ಮಿಯೆ ; ಮಧುರಭಾಷಿಣಿ–ಮಧುರವಾಗಿ ಮಾತನಾಡುವವಳೆ ; ಶಾಂಭವಿ–ಶಂಭುವಿನ (ಈಶ್ವರನ) ಪತ್ನಿಯೆ ; ಶಶಾಂಕ–ಚಂದ್ರನಂತೆ ; ವದನೆ–ಮುಖವುಳ್ಳವಳೆ ; ಶಿವಶಂಕರಿ–ಮಂಗಳವನ್ನುಂಟುಮಾಡುವ ಶಂಕರಿಯೆ ; ತ್ರಿಭುವನ ಸುಂದರಿ–ಮೂರು ಲೋಕದಲ್ಲೂ ಅತಿಶಯವಾದ ಸೌಂದರ್ಯವುಳ್ಳವಳೆ ; ವಾರಾಹಿ–ವಿಷ್ಣುವಿನ ಅವತಾರವಾದ ಆದಿವರಾಹನ ಪತ್ನಿಯೆ ; ವೈಷ್ಣವಿ–ವಿಷ್ಣುಪತ್ನಿಯೆ ; ಸುಮಂಗಲಿ–ಮಂಗಳ ಸ್ವರೂಪಳೆ ; ವಾಮಿನಿ–ಭಾಮಿನಿ ; ನಿಗಮಾಗಮ ಸಂಚಾರಿಣಿ–ವೇದಶಾಸ್ತ್ರಗಳಲ್ಲಿ ಸಂಚರಿಸುವವಳೆ ; ಶ್ರೀ ರಾಜರಾಜೇಶ್ವರಿ ; ವಿಮಲ–ಶುದ್ಧವಾದ ; ಚಿನ್ಮಯಾನಂದದಾಯಿನಿ–ಜ್ಞಾನಮಯವಾದ ಆನಂದವನ್ನು ನೀಡುವವಳೆ ; ಶೂಲಿನಿ–ಶೂಲವನ್ನು ಧರಿಸಿದವಳೆ ; ಪುರಾಣಿ–ಪ್ರಾಚೀನಳಾದವಳೆ ; ತ್ರಿತಾಪಶಮನಿ–ಆಧಿದೈವಿಕ, ಆಧಿಭೌತಿಕ, ಆಧಿದೈಹಿಕಗಳೆಂಬ ಮೂರು ಬಗೆಯ ಸಂಕಟಗಳನ್ನು ; ಶಮನಿ–ಪರಿಹರಿಸುವವಳೆ ; ಸೋಮ ಸೂರ್ಯ ಅಗ್ನಿಲೋಚನಿ–ಚಂದ್ರ ಸೂರ್ಯ ಅಗ್ನಿಗಳೆಂಬ ಕಣ್ಣುಗಳುಳ್ಳವಳೆ ; ವರಕೃಪಾವನಿ – ಕೃಪೆಮಾಡುವವಳೆ ; ನತಜನ – ಭಕ್ತಜನರ ; ಭಯ–ಸಂಕಟವನ್ನು, ಭಯವನ್ನು ; ವಿದಾರಿಣಿ–ನಾಶಮಾಡುವವಳೆ ; ಪ್ರಣವಪಂಜರತನುವಾಸಿನಿ–ಓಂಕಾರವೆಂಬ ದೇಹ ಧರಿಸಿದವಳೆ ; ಭಂಡ ಮಹಿಷಾದಿ–ಭಂಡಾಸುರ ಮಹಿಷಾಸುರ ಮೊದಲಾದ ; ದಾನವ–ರಾಕ್ಷಸರ ; ಮದ–ಗರ್ವವನ್ನು ; ವಿಭಂಜನಿ–ನಾಶಮಾಡಿದವಳೆ ; ನಿರಂಜನಿ–ಪಾರ್ವತಿಯೆ ; ಮನೋನ್ಮನಿ–ಮನಸ್ಸಿಗೆ ಆಹ್ಲಾದವುಂಟುಮಾಡುವವಳೆ ; ಪಾಂಡವ–ಪಾಂಡವರಿಗೆ ; ಸಹಾಯುಡೈನ–ಸಹಾಯಕನಾಗಿದ್ದ ; ವೆಂಕಟಪತಿ–ಕೃಷ್ಣನ (ವೆಂಕಟಪತಿ ಎನ್ನುವುದು ಪಲ್ಲವಿ ಗೋಪಾಲಯ್ಯನವರ ಕೃತಿಗಳ ಅಂಕಿತ) ಸಹೋದರಿ–ಸೋದರಿಯಾದ ದೇವಿಯೆ ; ತ್ರಿಕೂಟವಾಸಿನಿ–ತ್ರಿಕೂಟಾಚಲದಲ್ಲಿ ವಾಸಿಸುವವಳೆ, ನನ್ನ ಬಿನ್ನಹವನ್ನು ಕೇಳಿ ಆದರಿಸಲು ಇದು ತಕ್ಕ ಸಮಯ.

**ಭಾವಾರ್ಥ :** ದೇವಿಯ ರೂಪ ಗುಣ ವರ್ಣನೆಮಾಡಿ ಕೃತಿಕಾರರು ಆಕೆಯಲ್ಲಿ ತಮ್ಮ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. " ಅಮ್ಮ ನನ್ನ ಮೊರೆಯನ್ನು ಕೇಳಿ ಕಾಪಾಡಲು ಇದೇ ತಕ್ಕ ಸಮಯವಾಗಿದೆ " ಎಂದು ಹಂಬಲಿಸುತ್ತಾರೆ. ದೇವಿಯ ವಿಶೇಷಣ

ಗಳಾಗಿ ಆರಿಸಿಕೊಂಡ ಶಬ್ದ ಗಳಲ್ಲಿಯೂ, ಆಕೆಯ ಅಪ್ರತಿಮ ಸುಂದರವಾದ ರೂಪು, ಗುಣ, ಸಾಮರ್ಥ್ಯಗಳನ್ನು ಚಿತ್ರಿಸಬಲ್ಲಂಥವುಗಳನ್ನೇ ಕೃತಿಕಾರರು ಆರಿಸಿದ್ದಾರೆ. ಸರಸ್ವತಿ, ಲಕ್ಷ್ಮಿ, ಪಾರ್ವತಿ ಎಂದೆಲ್ಲ ರೂಪಗಳ ಏಕೈಕಶಕ್ತಿಯಾದ ಜಗದಂಬೆಯನ್ನು ವರ್ಣಿಸುತ್ತಾ ಅವಳ ಮೂರು ಕಣ್ಣುಗಳೇ ಸೂರ್ಯ, ಚಂದ್ರ, ಅಗ್ನಿ ಎಂದು ವರ್ಣಿಸಿರುವುದು ತುಂಬ ಮನೋಜ್ಞವಾಗಿದೆ.

ತೋಡಿ ರಾಗದಲ್ಲಿ ಹಾಡುವ ಈ ಕೃತಿ ಆರ್ತಭಾವವನ್ನು, ತಾಯಿಯನ್ನು ಕುರಿತ ಶಿಶುಸಹಜವಾದ ಮೊರೆಯನ್ನು ಪ್ರಭಾವ ಯುತವಾಗಿ ಚಿತ್ರಿಸುತ್ತದೆ. ತೋಡಿ ಸೌಮ್ಯವಾದ ರಾಗ. ದೈನ್ಯ ಭಕ್ತಿಗಳ ಅಭಿವ್ಯಕ್ತಿಗೆ ಅದು ಬಹಳ ಸಮಂಜಸವಾದ ರಾಗವಾಗಿದೆ.

* * *

೨

ರಾಗ : ತೋಡಿ ತಾಳ : ತ್ರಿಶ್ರಏಕ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಕಮಲಾಂಬಿಕೆ ಆಶ್ರಿತ ಕಲ್ಪಲತಿಕೆ ಚಂಡಿಕೆ
ಕಮನೀಯಾರುಣಾಂಶುಕೆ ಕರವಿಧೃತ ಶುಕೇ
ಮಾಮವ ಕಮಲಾಂಬಿಕೆ ಜಗದಂಬಿಕೆ

ಅನುಪಲ್ಲವಿ : ಕಮಲಾಸನಾದಿ ಪೂಜಿತ ಕಮಲಪದೇ ಬಹುವರದೇ
ಕಮಲಾಲಯತೀರ್ಥ ವೈಭವೇ ಶಿವೇ ಕರುಣಾರ್ಣವೇ

ಚರಣ : ಸಕಲಲೋಕ ನಾಯಿಕೆ ಸಂಗೀತರಸಿಕೆ
ಸುಕವಿತ್ವ ಪ್ರದಾಯಿಕೆ ಸುಂದರಿ ಗತಮಾಯಿಕೆ
ವಿಕಳೇಬರೆ ಮುಕ್ತಿದಾನ ನಿಪುಣೆ ಅಘಹರಣೆ
ವಿಯದಾದಿಭೂತ ಕಿರಣೇ ವಿನೋದ ಚರಣೇ ಅರುಣೇ
ಸಕಲೇ ಗುರುಗುಹಕರಣೇ ಸದಾಶಿವಾಂತಃಕರಣೇ
ಅಕಚಟತಪಾದಿ ವರಣೇ ಅಖಂಡೈಕರಸಪೂರ್ಣೆ (ಕಮಲಾಂಬಿಕೆ)

**ಪ್ರತಿಪದಾರ್ಥ** : ಆಶ್ರಿತ ಕಲ್ಪಲತಿಕೇ–ಆಶ್ರಯಕ್ಕೆ ಬಂದವರಿಗೆ ಕಲ್ಪಲತೆಯಂತೆ ಬೇಡಿದುದನ್ನು ನೀಡುವವಳೇ ; ಕರ–ಕೈಯಲ್ಲಿ ; ವಿಧೃತ ಶುಕೇ–ಗಿಣಿಯನ್ನು ಹಿಡಿದವಳೇ ; ಚಂಡಿಕೆಯೇ ; ಕಮನೀಯ–ಮನೋಹರವಾದ ; ಅರುಣಾಂಶುಕೆ–ಕೆಂಬಣ್ಣದ ವಸ್ತ್ರ ಧರಿಸಿದವಳೇ ; ಕಮಲಾಂಬಿಕೇ ; ಜಗದಂಬಿಕೆ–ಜಗತ್ತಿಗೆ ತಾಯಿಯಾದ ನೀನು ; ಮಾಮವ–ನನ್ನನ್ನು ಕಾಪಾಡು. ಕಮಲಾಸನಾದಿ ಪೂಜಿತ–ಬ್ರಹ್ಮನೇ ಮೊದಲಾದವರಿಂದ ಪೂಜೆಗೊಂಡ ; ಕಮಲಪದೆ–ತಾವರೆಯಂತಹ ಪಾದಗಳುಳ್ಳವಳು ; ಬಹುವರದೆ–ಅನೇಕ ವರಗಳನ್ನು ನೀಡುವವಳು ; ಕಮಲಾಲಯ ತೀರ್ಥದಲ್ಲಿ (ಕ್ಷೇತ್ರದಲ್ಲಿ) ಶೋಭಿಸುವವಳು ; ಶಿವೇ–ಮಂಗಳಕರಳಾದವಳು ; ಕಾರುಣಾರ್ಣವೆ–ಕರುಣೆಯ ಸಾಗರದಂತಿರುವವಳು ; ಸಕಲ ಲೋಕಗಳಿಗೂ ನಾಯಕಿಯಾದವಳು ; ಸಂಗೀತವನ್ನು ಸವಿಯುವವಳು ; ಸುಕವಿತ್ವಪ್ರದಾಯಿಕೆ–ಶ್ರೇಷ್ಠವಾದ ಕವಿತ್ವ ಶಕ್ತಿಯನ್ನು ನೀಡುವವಳು ; ಸುಂದರಿ ;

ಗತಮಾಯಿಕೆ–ಮಾಯೆಯನ್ನು ಹೋಗಲಾಡಿಸಿದವಳು ; ವಿಕಳೇಬರೆ–ಕಳೇಬರ (ದೇಹ) ಇಲ್ಲದವಳು (ದೇಹದ ಯಾವ ದೋಷಗಳೂ ಇಲ್ಲದವಳು ಎಂದು ಭಾವ) ; ಮೋಕ್ಷವನ್ನು ನೀಡುವುದರಲ್ಲಿ ನಿಪುಣಳಾದವಳು ; ಅಘ–ಪಾಪಗಳನ್ನು ; ಹರಣೆ–ಪರಿಹರಿಸುವವಳು ; ವಿಯದಾದಿಭೂತಕಿರಣೆ–ಆಕಾಶವೇ ಮೊದಲಾದ ಪಂಚಭೂತಗಳನ್ನು ಚದುರಿಸುವವಳು ; (ಪೃಥ್ವಿ, ಅಪ್ಪು, ವಾಯು, ತೇಜಸ್ಸು, ಆಕಾಶ ಇವು ಪಂಚಭೂತಗಳು) ವಿನೋದ–ರಂಜನೀಯವಾದ ಚರಣಗಳುಳ್ಳವಳು ; ಅರುಣೇ–ಕೆಂಬಣ್ಣವುಳ್ಳವಳು ; ಸಕಲಳು ; ಗುರುಗುಹನಿಗೆ ಕರಣರೂಪದಲ್ಲಿರುವವಳು ; (ಇಲ್ಲಿ ಕೃತಿಕಾರರ ಅಂಕಿತ ಗುರುಗುಹ) ಸದಾಶಿವನನ್ನು ಅಂತಃಕರಣದಲ್ಲಿ ಉಳ್ಳವಳು ; ಅಕಚಟತಪಾದಿ ವರಣೇ–ಗೂಢಾರ್ಥವುಳ್ಳ ಮಂತ್ರಾಕ್ಷರಗಳನ್ನು ಒಲಿದು ವರಿಸಿರುವವಳು ; ಅಖಂಡೈಕ ರಸ ಪೂರ್ಣೇ–ಅಖಂಡವಾದ ಪೂರ್ಣವಾದ ರಸಾನಂದವುಳ್ಳವಳು—ಇಂತಹ ಕಮಲಾಂಬಿಕೆಯೇ, ಮಾಮವ–ನನ್ನನ್ನು ಕಾಪಾಡು.

* * *

೩

ರಾಗ : ತೋಡಿ ತಾಳ : ರೂಪಕ ತ್ಯಾಗರಾಜರು

ಪಲ್ಲವಿ : ರಾಜುವೆಡಲೆ ಜೂತಾಮು ರಾರೇ ; ಕಸ್ತೂರಿ ರಂಗ (ರಾಜು)

ಅನುಪಲ್ಲವಿ : ತೇಜಿನೆಕ್ಕಿ ಸಮಸ್ತ ರಾಜುಲೂಡಿಗಮು ಜೇಯ
ತೇಜರಿಲ್ಲು ನವರತ್ನಪು ದಿವ್ಯ ಭೂಷಣಮುಲಿಡಿ ರಂಗ (ರಾಜು)

ಚರಣ : ಕಾವೇರೀ ತೀರಮುನನು ಪಾವನಮಗು ರಂಗಪುರಿನಿ
ಶ್ರೀವೆಲಯು ಚಿತ್ರವೀಧಿಲೋ ವೇಡ್ಕಗ ರಾಗ
ಸೇವನುಗನಿ ಸುರುಲು ವಿರುಲಚೇ ಪ್ರೇಮನು ಪೂಜಿಂಚಗ
ಭಾವಿಂಚು ತ್ಯಾಗರಾಜು ಪಾಡಗ ವೈಭೋಗ ರಂಗ (ರಾಜು)

**ಪ್ರತಿಪದಾರ್ಥ :** ಕಸ್ತೂರಿ ರಂಗರಾಜು–ಕಸ್ತೂರಿ ರಂಗನಾಥನು ; ವೆಡಲೆ–ಹೊರಟಿರುವುದನ್ನು (ಮೆರವಣಿಗೆ ಹೊರಟಿರುವುದನ್ನು) ; ಜೂತಾಮು–ನೋಡೋಣ ; ರಾರೇ–ಬನ್ನಿರಿ ; ತೇಜಿನೆಕ್ಕಿ–ಕುದುರೆಗಳನ್ನು ಹತ್ತಿಕೊಂಡು ; ಸಮಸ್ತ ರಾಜುಲು–ಸಕಲ ರಾಜರೂ ; ಊಡಿಗಮು–ಸೇವೆಯನ್ನು (ರಾಜುಲು+ಊಡಿಗಮು=ರಾಜುಲೂಡಿಗಮು) ; ಜೇಯ–ಮಾಡುತ್ತಿರಲು ; ತೇಜಿಲ್ಲು–ಪ್ರಕಾಶಿಸುತ್ತಿರುವ ; ನವರತ್ನಪು–ನವರತ್ನದ ; ದಿವ್ಯಭೂಷಣಮುಲಿಡಿ–ದಿವ್ಯವಾದ ಆಭರಣಗಳನ್ನು ಧರಿಸಿ ; ರಂಗರಾಜುವೆಡಲೆ–ರಂಗನಾಥನು ಹೊರಟಿರುವುದನ್ನು ; ಕಾವೇರಿ ತೀರಮುನನು–ಕಾವೇರೀ ತೀರದಲ್ಲಿ ; ಪಾವನಮುಗು–ಪವಿತ್ರವಾದ ; ಶ್ರೀವೆಲಯು–ಲಕ್ಷ್ಮಿಗೆ ನೆಲೆಯಾದ (ಲಕ್ಷ್ಮಿಯು ವಾಸಿಸುವ) ರಂಗಪುರಿನಿ–ಶ್ರೀರಂಗದಲ್ಲಿ ; ಚಿತ್ರವೀಧಿಲೊ–ಚಿತ್ರಬೀದಿಯಲ್ಲಿ (ಶ್ರೀರಂಗದಲ್ಲಿ ದೇವರ ಉತ್ಸವವು ನಡೆಯುವ ಒಂದು ದಾರಿಯ ಹೆಸರು) ; ವೇಡ್ಕಗ–ಆನಂದದಿಂದ ; ರಾಗ–ಬರುತ್ತಿರಲು ; ಸುರುಲು–ದೇವತೆಗಳು ; ಸೇವನುಗನಿ–(ಅವನ) ಸೇವೆಯನ್ನು ಮಾಡುವ ; ವಿರುಲಚೇ–ಸಂತೋಷದಿಂದ ; ಪ್ರೇಮನು ಪೂಜಿಂಚಗ–ಪ್ರೇಮದಿಂದ ಪೂಜಿಸುತ್ತಿರಲು ; ತ್ಯಾಗರಾಜು–ತ್ಯಾಗರಾಜನು ; ಭಾವಿಂಚು ಪಾಡಗ–ಭಾವಪೂರ್ಣನಾಗಿ ಹಾಡಲು ; ವೈಭೋಗ್ಯರಂಗರಾಜು–ವೈಭವದಿಂದ ರಂಗನಾಥನು (ಉತ್ಸವ) ಹೊರಟಿದ್ದಾನೆ ; ಜೂತಾಮು ರಾರೇ–ನೋಡೋಣ ಬನ್ನಿರಿ.

**ಭಾವಾರ್ಥ :** ರಂಗನಾಥನು ಮೆರವಣಿಗೆಯಲ್ಲಿ ಉತ್ಸವ ಹೊರಟಿರುವುದನ್ನು ನೋಡೋಣ ಬನ್ನಿರಿ. ರಾಜಾಧಿರಾಜರು ಕುದುರೆಗಳನ್ನೇರಿ ಸೇವಿಸುತ್ತ ಬರುತ್ತಿರಲು, ದಿವ್ಯವಾದ ನವರತ್ನಖಚಿತ ಆಭರಣಗಳಿಂದ ಅಲಂಕೃತವಾಗಿ ರಂಗನಾಥನು ಬರುತ್ತಿದ್ದಾನೆ ನೋಡೋಣ ಬನ್ನಿ. ಕಾವೇರಿ ತೀರದ, ಪರಮ ಪವಿತ್ರವಾದ, ಲಕ್ಷ್ಮಿಯ ನೆಲೆಯಾದ ಶ್ರೀರಂಗದಲ್ಲಿ ಚಿತ್ರಬೀದಿಯಲ್ಲಿ ಆನಂದವಾಗಿ ಮೆರವಣಿಗೆ ಬರುತ್ತಿರುವಾಗ, ದೇವತೆಗಳು ಅವನ ಸೇವೆಮಾಡುವ ಸಂತೋಷವನ್ನು ಅನುಭವಿಸುತ್ತ ಪ್ರೀತಿಭಕ್ತಿಗಳಿಂದ ಪೂಜಿಸುತ್ತಿದ್ದಾರೆ. ಈ ವೈಭವದ ರಂಗನಾಥನ ಉತ್ಸವವನ್ನು ನೋಡೋಣ ಬನ್ನಿರಿ.

**ವಿಶೇಷಾಂಶ :** ತ್ಯಾಗರಾಜರು ತಿರುಪತಿ, ಕಂಚಿ ಮುಂತಾದ ಪುಣ್ಯ ಕ್ಷೇತ್ರಗಳ ಯಾತ್ರೆಯನ್ನು ಕೈಗೊಂಡು ಪರಮಾತ್ಮನನ್ನು ಸೇವಿಸಿ ಶ್ರೀರಂಗಕ್ಕೆ ಬಂದರು. ಅಲ್ಲಿ ರಂಗನಾಥನನ್ನು ಪೂಜಿಸಿ ಭಕ್ತಿಯಿಂದ 'ಶ್ರೀರಂಗ ಪಂಚರತ್ನ' ಎಂದು ಕರೆಯುವ ಐದು ಕೃತಿ ಕುಸುಮಗಳನ್ನು ಅರ್ಪಿಸಿದರು. ಅವುಗಳಲ್ಲಿ ಈ ಕೃತಿಯೂ ಒಂದು. ಮಿಕ್ಕವು (i) ಕಾಂಭೋಜಿ ರಾಗದ 'ಓ ರಂಗಶಾಯಿ', (ii) ಆರಭಿ ರಾಗದ 'ಜೂತಾಮು ರಾರೇ', (iii) ದೇವಗಾಂಧಾರಿಯ 'ವಿನರಾದ ನಾ ಮನವಿ'; ಮತ್ತು (iv) ಸಾರಂಗ ರಾಗದ 'ಕರುಣಜೂಡನಯ್ಯ'. ಪ್ರಸ್ತುತ ಕೃತಿಯೂ ಸೇರಿದಂತೆ ಈ ಐದು ಕೀರ್ತನೆಗಳ ವಸ್ತು ಶ್ರೀರಂಗದಲ್ಲಿ ವೈಕುಂಠ ಏಕಾದಶಿಯ ದಿನ ಶ್ರೀರಂಗನಾಥನಿಗೆ ನಡೆಯುವ ಉತ್ಸವದ ವರ್ಣನೆ.

* * *

೪

ರಾಗ : ಚಕ್ರವಾಕ    ತಾಳ : ಮಿಶ್ರಛಾಪು    ತ್ಯಾಗರಾಜರು

ಪಲ್ಲವಿ : ಎಟುಲ ಬ್ರೋತುವೋ ತೆಲಿಯ ! ಏಕಾಂತ ರಾಮಯ್ಯ ! (ಎಟುಲ)

ಅನುಪಲ್ಲವಿ : ಕಟಕಟ ! ನಾ ಚರಿತಮು ಕರ್ಣಕಠೋರಮಯ್ಯ (ಎಟುಲ)

ಚರಣ : ಪಟ್ಟಿ ಗೊಡ್ಡು ರೀತಿ ಭಕ್ಷಿಂಚಿ ತಿರಿಗಿತಿ
ಪುಟ್ಟುಲೋಭುಲನು ಪೊಟ್ಟಕೈ ಪೊಗಡಿತಿ
ದುಷ್ಟುಲತೋ ಗೂಡಿ ದುಷ್ಕೃತ್ಯಮು ಸಲ್ಪಿ
ರಟ್ಟುಜೇಸಿನ ತ್ಯಾಗರಾಜುನಿ ದಯತೋ (ಎಟುಲ)

**ಪ್ರತಿಪದಾರ್ಥ :** ಏಕಾಂತರಾಮಯ್ಯ–ನನ್ನ ರಾಮನೇ, ನನ್ನ ಅಂತರಂಗದೈವವಾದ ಶ್ರೀ ರಾಮಚಂದ್ರನೇ ; ಎಟುಲ–ಹೇಗೆ ತಾನೆ ; ಬ್ರೋತುವೋ–ನನ್ನನ್ನು ಕಾಪಾಡುವೆಯೋ ; ತೆಲಿಯ–ತಿಳಿಯದಲ್ಲ ; ಕಟಕಟ–ಅಯ್ಯಯ್ಯೋ ; ನಾ ಚರಿತಮು–ನನ್ನ ಚರಿತ್ರೆಯು ; ಕರ್ಣಕಠೋರಮಯ್ಯ–ಕೇಳಲು ಅಸಹನೀಯವಾಗಿದೆಯಲ್ಲ ; ಪಟ್ಟಿ ಗೊಡ್ಡು ರೀತಿ(ತ)–ಕಳ್ಳ ಹಸುವಿನ ಹಾಗೆ, ಪುಂಡುದನದ ಹಾಗೆ ; ಭಕ್ಷಿಂಚಿ ತಿರುಗಿತಿ–ಮೇಯುತ್ತಾ ತಿರುಗಿದೆ ; ಪುಟ್ಟು ಲೋಭುಲನು–ಹುಟ್ಟು ಲೋಭಿಗಳನ್ನು ; ಪೊಟ್ಟಕೈ–ಹೊಟ್ಟೆಪಾಡಿಗಾಗಿ ; ಪೊಗಡಿತಿ(ನ್) – ಹೊಗಳಿದೆನು ; ದುಷ್ಟುಲತೋ ಗೂಡಿ–ದುಷ್ಟರೊಂದಿಗೆ ಕೂಡಿಕೊಂಡು ; ದುಷ್ಕೃತ್ಯಮು–ದುಷ್ಕಾರ್ಯಗಳನ್ನು ; ಸಲ್ಪಿ–ಮಾಡಿ ; ರಟ್ಟುಜೇಸಿನ–ನಿಂದೆಗೆ ಗುರಿಯಾದ ; ತ್ಯಾಗರಾಜುನಿ–ತ್ಯಾಗರಾಜನನ್ನು ; ದಯತೋ–ದಯೆಯಿಂದ (ಹೇಗೆ ಕಾಪಾಡುವೆಯೋ ತಿಳಿಯದಲ್ಲ !)

**ಭಾವಾರ್ಥ :** ಶ್ರೀ ರಾಮಚಂದ್ರ, ನನ್ನನ್ನು ನೀನು ಹೇಗೆತಾನೆ ಕಾಪಾಡುತ್ತೀಯೆ ? ನನ್ನ ಚರಿತ್ರೆ ಕೇಳಲು ಅಸಹನೀಯವಾಗಿದೆ. ಪುಂಡು ಹಸುವಿನ ಹಾಗೆ ತಿನ್ನುತ್ತಲೇ ಕಾಲ ಕಳೆದುಬಿಟ್ಟಿದ್ದೇನೆ. ದುಷ್ಟರೊಂದಿಗೆ ಸೇರಿಕೊಂಡು ಅನೇಕ

ಕೆಟ್ಟ ಕೆಲಸಗಳನ್ನು ಮಾಡಿದ್ದೇನೆ. ಲೋಕದ ನಿಂದೆಗೆ ಗುರಿಯಾಗಿದ್ದೇನೆ. ಇಂಥ ನನ್ನನ್ನು ನೀನು ಹೇಗೆ ತಾನೆ ಕಾಪಾಡುವೆಯಯ್ಯ ಎಂದು ತ್ಯಾಗರಾಜರು ಕೇಳುತ್ತಾರೆ.

ಪರಮಾತ್ಮನಲ್ಲಿ ಭಕ್ತಿ ಬೆಳೆಯಬೇಕಾದರೆ ಮೊದಲು ಸಾಧಕನಿಗೆ ತನ್ನ ದೋಷದ ಅರಿವಾಗಬೇಕು. ಒಂದು ಹಂತದಲ್ಲಿ ತನ್ನ ದೋಷಗಳ ಅರಿವು ಎಷ್ಟುಮಟ್ಟಿಗೆ ಆಗುತ್ತದೆಂದರೆ ಅದು ಅಗಾಧವಾಗಿ ಕಂಡು ತನ್ನನ್ನು ಉದ್ಧರಿಸುವುದು ಎಷ್ಟು ಕಷ್ಟದ ಕೆಲಸ ಎಂದು ಆಶ್ಚರ್ಯವಾಗುತ್ತದೆ. ಆದರೆ ಉದ್ಧಾರಮಾಡಬೇಕಾದರೆ ಭಗವಂತನೊಬ್ಬನಿಗೆ ಸಾಧ್ಯವೆಂಬ ನಂಬಿಕೆಯು ಇರುವುದರಿಂದ ಸಮಸ್ತವನ್ನೂ ಅವನ ಅಡಿದಾವರೆಗಳಲ್ಲಿ ಅರ್ಪಿಸಿ ಅವನು ಕ್ಷಮಾಯಾಚನೆ ಮಾಡುತ್ತಾನೆ. ಈ ಭಾವವು ತ್ಯಾಗರಾಜರ ಈ ಕೃತಿಯಲ್ಲಿ ವ್ಯಕ್ತವಾಗಿದೆ.

* * *

೫

ರಾಗ : ಚಕ್ರವಾಕ ತಾಳ : ರೂಪಕ ತ್ಯಾಗರಾಜರು

ಪಲ್ಲವಿ : ಸುಗುಣಮುಲೇ ಜೆಪ್ಪುಕೊಂಟಿ ಸುಂದರ ರಘುರಾಮ (ಸುಗುಣ)

ಅನುಪಲ್ಲವಿ : ವಗಲೆರುಂಗಲೇಕ ಯಿಟು ವತ್ತುವನುಚು ದುರಾಸಚೇ (ಸುಗುಣ)

ಚರಣ : ಸ್ನಾನಾದಿ ಸುಕರ್ಮಂಬುಲು ವೇದಾಧ್ಯಯನಂಬು ಲೆರುಗ
ಶ್ರೀನಾಯಕ ಕ್ಷಮಿಯಿಂಪುಮು ಶ್ರೀ ತ್ಯಾಗರಾಜನುತ (ಸುಗುಣ)

**ಪ್ರತಿಪದಾರ್ಥ :** ಸುಂದರ ರಘುರಾಮ–ಸುಂದರನಾದ ಶ್ರೀರಾಮಚಂದ್ರನೆ ; ವಗಲು–ಮಾಯೆಯನ್ನು ; ಎರುಂಗಲೇಕ–ತಿಳಿಯದೆ ; ಇಟು–ಇಲ್ಲಿಗೆ ; ವತ್ತುವನುಚು–ಬರುತ್ತೀಯೆ ಎಂದು ; ದುರಾಸಚೇ–ದುರಾಸೆಯಿಂದ ; ಸುಗುಣಮುಚೇ–(ನಿನ್ನ) ಸುಗುಣಗಳನ್ನೇ ; ಜೆ (ಚೆ) ಪ್ಪುಕೊಂಟಿ– ಹೇಳಿಕೊಳ್ಳುತ್ತಿದ್ದೇನೆ ; ಶ್ರೀನಾಯಕ–ಲಕ್ಷ್ಮೀರಮಣನಾದ ಶ್ರೀರಾಮ (ನಾನು) ಸ್ನಾನಾದಿ ಸುಕರ್ಮಂಬುಲು–ಸ್ನಾನವೇ ಮೊದಲಾದ ಸತ್ಕರ್ಮಗಳನ್ನಾಗಲಿ ; ವೇದಾಧ್ಯಯನಂಬು–ವೇದಾಧ್ಯಯನವನ್ನಾಗಲಿ ; ಲೆರುಗ–ತಿಳಿಯದವನು ; ಕ್ಷಮಿಯಿಂಪುಮು–(ನನ್ನನ್ನು) ಕ್ಷಮಿಸಬೇಕು ; ತ್ಯಾಗರಾಜನುತ–ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರ.

**ಭಾವಾರ್ಥ :** ನಿನ್ನ ಮಾಯೆಯನ್ನು ನಾನರಿಯೆ. ಸ್ನಾನ ಸಂಧ್ಯಾವಂದನೆಯೇ ಮೊದಲಾದ ಕರ್ಮಗಳನ್ನು ಅರಿಯೆ. ವೇದಾಧ್ಯಯನವನ್ನು ತಿಳಿಯೆ. ಆದರೆ ನೀನು ಬರುತ್ತೀಯೆ ಎಂಬ ಹೇರಾಸೆಯಿಂದ ಇಲ್ಲಿ ನಿನ್ನ ಸದ್ಗುಣಗಳನ್ನೇ ಹೇಳಿಕೊಳ್ಳುತ್ತಾ ಕುಳಿತಿದ್ದೇನೆ. ನನ್ನನ್ನು ಕ್ಷಮಿಸು ಓ, ರಘುರಾಮ ಎಂಬುದಾಗಿ ಶ್ರೀ ರಾಮಚಂದ್ರನಲ್ಲಿ ತ್ಯಾಗರಾಜರು ಮೊರೆಯಿಡುತ್ತಾರೆ.

ಪರಮಾತ್ಮನಲ್ಲಿ ನಿಜವಾದ ಭಕ್ತಿ ಬೆಳೆಯಬೇಕಾದರೆ ವೇದಶಾಸ್ತ್ರಗಳ ಅಧ್ಯಯನ ಮಾತ್ರದಿಂದಾಗಲಿ, ಸ್ನಾನ ಸಂಧ್ಯಾದಿ ಕರ್ಮಮಾತ್ರದಿಂದಲಾಗಲಿ ಪ್ರಯೋಜನವಿಲ್ಲ ; ನಿಜವಾದ ಭಕ್ತಿ ದೊರೆತಮೇಲಂತೂ ಇವುಗಳಿಂದ ಏನೇನೂ ಉಪಯೋಗವಿಲ್ಲ ಎಂಬುದಾಗಿ ಶ್ರೀ ರಾಮಕೃಷ್ಣ ಪರಮಹಂಸರು ಒಂದುಕಡೆ ಹೇಳುತ್ತಾರೆ. ಇವೆಲ್ಲವುಗಳಿಗಿಂತ ಮಿಗಿಲಾಗಿ ಶುದ್ಧ ಮನಸ್ಸಿನಿಂದ ಅರ್ಪಿಸುವ ಪ್ರೀತಿರೂಪದ ಭಕ್ತಿ ಪರಮಾತ್ಮನಿಗೆ ಹೆಚ್ಚು ಪ್ರಿಯ. ಆದ್ದರಿಂದಲೇ ಅವನ ನಾಮಕೀರ್ತನೆಯನ್ನೇ ಮಾಡುತ್ತ ಅವನ ಸುಗುಣಗಳನ್ನೇ ಹೇಳಿಕೊಳ್ಳುತ್ತಾ ಇರುವ ಭಕ್ತ ನಾನು, ನನಗೆ ಬಾಹ್ಯಕರ್ಮಗಳ ಪರಿಶ್ರಮವಿಲ್ಲ, ಕ್ಷಮಿಸು ಎಂದು ತ್ಯಾಗರಾಜರು ಇಲ್ಲಿ ಬೇಡುತ್ತಿದ್ದಾರೆ.

೬

ರಾಗ : ಚಕ್ರವಾಕ ತಾಳ : ಆದಿ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಗಜಾನನಯುತಂ ಗಣೇಶ್ವರಂ

ಅನುಪಲ್ಲವಿ : ಭಜಾಮಿ ಸತತಂ ಸುರೇಶ್ವರಂ (ಗಜಾನನ)

ಚರಣ : ಅಜೇಂದ್ರ ಪೂಜಿತ ವಿಘ್ನೇಶ್ವರಂ
ಗಣಾದಿ ಸನ್ನುತ ಪದಪದ್ಮಕರಂ
ಕುಂಜರ ಭಂಜನ ಚತುರತರಕರಂ
ಗುರುಗುಹಾಗ್ರಜಂ ಪ್ರಣವಾಕಾರಂ (ಗಜಾನನ)

**ಪ್ರತಿಪದಾರ್ಥ :** ಗಜಾನನಯುತಂ–ಆನೆಯ ಮುಖವನ್ನು ಹೊಂದಿರುವ; ಗಣೇಶ್ವರಂ–ಗಣಗಳಿಗೆ ಒಡೆಯನಾದ ಸುರೇಶ್ವರಂ–ದೇವತೆಗಳಿಗೆ ಒಡೆಯನಾದ (ವಿಘ್ನೇಶ್ವರನನ್ನು); ಸತತಂ–ಯಾವಾಗಲೂ; ಭಜಾಮಿ–ಭಜಿಸುತ್ತೇನೆ; ಅವನು, ಅಜ+ಇಂದ್ರ ಪೂಜಿತ–ಬ್ರಹ್ಮ ಮತ್ತು ಇಂದ್ರರಿಂದ ಪೂಜೆಗೊಂಡವನು; ವಿಘ್ನೇಶ್ವರಂ–ವಿಘ್ನಗಳಿಗೆ ಒಡೆಯ (ಅವುಗಳನ್ನು ನಿವಾರಿಸಲು ಸಮರ್ಥನೆಂಬ ಭಾವ); ಗಣಾದಿ ಸನ್ನುತ–ಗಣಗಳಿಂದ ಪ್ರಾರ್ಥಿತವಾದ; ಪದಪದ್ಮಕರಂ–ತಾವರೆಯಂತಹ ಪಾದಗಳುಳ್ಳವನು; ಕುಂಜರ–ಆನೆ (ಆನೆಯ ರೂಪದ ರಾಕ್ಷಸ); ಭಂಜನ–ನಾಶಮಾಡಲು; ಚತುರತರಕರಂ–ತಕ್ಕ ಚಾತುರ್ಯ ಸಾಮರ್ಥ್ಯವುಳ್ಳ; ಕರಂ–ಕೈಗಳುಳ್ಳವನು; ಗುರುಗುಹಾಗ್ರಜಂ–ಗುರುವಾದ ಗುಹನ–ಷಣ್ಮುಖನ ಅಣ್ಣನಾದವನು; ಪ್ರಣವಾಕಾರಂ–ಓಂಕಾರ ಸ್ವರೂಪನಾದವನು.

ಗಣಾಧಿಪತಿಯೂ, ಷಣ್ಮುಖನ ಸಹೋದರನೂ, ಓಂಕಾರ ಸ್ವರೂಪನೂ, ಆದ ವಿಘ್ನನಿವಾರಕನನ್ನು ಸದಾ ಪೂಜಿಸುತ್ತೇನೆ.

* * *

೭

ರಾಗ : ಶ್ರೀರಂಜನಿ ತಾಳ : ಆದಿ ತ್ಯಾಗರಾಜರು

ಪಲ್ಲವಿ : ಸರಿಯೆವ್ವರೇ ? ಶ್ರೀ ಜಾನಕೀ ನೀ (ಸರಿಯೆವ್ವರೇ)

ಅನುಪಲ್ಲವಿ : ಪರಮಾತ್ಮುನಿಕೈ ಗಡಿದೇರಿ ಸದಾ
ಸಿರುಲಿಚ್ಚು ಟಕು ಜೇರಿಗೊಲ್ಚಿನ ನೀ (ಸರಿಯೆವ್ವರೇ)

ಚರಣ : ವನಮಂದು ಭಯಂಕರಮ್ಮೈನ ತಾ
ವುನ ನಿಲ್ಚುನನಿ ಮನುಸುದಲಿಸಿ
ಕನಕಾಂಗಿಯಂದಂದುನ ರಾಜಸುಖಂಬುನು
ಗಲ್ಗ ಜೇಸಿತಿವೇ ತ್ಯಾಗರಾಜನುತ (ಸರಿಯೆವ್ವರೇ)

**ಪ್ರತಿಪದಾರ್ಥ :** ಶ್ರೀ ಜಾನಕೀ–ಸೀತಾದೇವಿಯೆ; ನೀ ಸರಿಯೆವ್ವರೆ–ನಿನಗೆ ಸಮಾನರು ಯಾರಿದ್ದಾರಮ್ಮ!; ಪರಮಾತ್ಮುನಿಕೈ–ಪರಮಾತ್ಮ ಶ್ರೀರಾಮನಿಗೆ; ಕಡಿತೇರಿ–ಸೇವೆ ಸಲ್ಲಿಸುತ್ತಾ; ಸದಾ–ಯಾವಾಗಲೂ; ಸಿರುಲು+ಇಚ್ಚುಟಕು–

ಅವನಿಗೆ ಸಂಪದಭ್ಯುದಯವನ್ನೇ ಉಂಟುಮಾಡಲೆಂದು ; ಜೇರಿಗೊಲಿಚಿನ–ಅವನೊಂದಿಗೇ ಸದಾ ಇದ್ದೆಯಲ್ಲ (ಕಾಡಿಗೂ ಅವನೊಂದಿಗೆ ಹೋದೆಯಲ್ಲ ಎಂದು ಭಾವ) ; ತ್ಯಾಗರಾಜನುತ ಕನಕಾಂಗಿ–ತ್ಯಾಗರಾಜನಿಂದ ಸ್ತುತಳಾದ, ಚಿನ್ನದಂತೆ ಮೈಬಣ್ಣವುಳ್ಳ ಜಾನಕಿಯೇ ; ವನಮಂದು–ಅರಣ್ಯದಲ್ಲಿ ; ಭಯಂಕರಮೈನ–ಭಯಂಕರವಾದ ; ತಾವುನನ್–ಸ್ಥಳಗಳಲ್ಲಿ ; ನಿಲ್ತುನನಿ–ನಿಲ್ಲುವುದೆಂಬ ; ಮನಸುದೆಲಿಸಿ–ಶ್ರೀರಾಮನ ಮನಸ್ಸನ್ನು ಅರ್ಥಮಾಡಿಕೊಂಡು ; ಅಂದಂದುನ–ಅಲ್ಲಲ್ಲೇ ; ರಾಜಸುಖಂಬುನು–ಅವನಿಗೆ ರಾಜಸುಖಗಳನ್ನು ; ಗಲ್ಗ ಜೇಸಿತಿನೆ–ಉಂಟುಮಾಡಿದೆಯಲ್ಲ, ನಿನಗೆ ಸಮಾನರು ಯಾರಿದ್ದಾರೆ ?

* * *

೮

ರಾಗ : ಶ್ರೀರಂಜನಿ ತಾಳ : ರೂಪಕ ತ್ಯಾಗರಾಜರು

ಪಲ್ಲವಿ : ಸೊಗಸುಗಾ ಮೃದಂಗ ತಾಳಮು ಜತಗೂರ್ಚಿ ನಿನ್ನು
ಸೊಕ್ಕಜೇಯು ಧೀರುಡೆವ್ವಡೋ

ಅನುಪಲ್ಲವಿ : ನಿಗಮ ಶಿರೋರ್ಥಮು ಗಲ್ಗಿನ ನಿಜವಾಕ್ಕುಲತೋ, ಸ್ವರಶುದ್ಧಮುತೋ (ಸೊಗಸು)

ಚರಣ : ಯತಿ ವಿಶ್ರಮ ಸದ್ಭಕ್ತಿ ವಿರತಿ ದ್ರಾಕ್ಷಾರಸ ನವರಸಯುತ
ಕೃತಿಚೇ ಭಜಿಯಿಂಚು ಯುಕ್ತಿ ತ್ಯಾಗರಾಜುನಿ ತರಮಾ ? ಶ್ರೀರಾಮ ! (ಸೊಗಸು)

**ಪ್ರತಿಪದಾರ್ಥ :** ಸೊಗಸುಗ (ನ್)–ಸೊಗಸಾಗಿ, ಕಿವಿಗಿಂಪಾಗುವಂತೆ ; ಮೃದಂಗ ತಾಳಮು–ಮೃದಂಗ ತಾಳ ಮೊದಲಾದವುಗಳನ್ನು ; ಜತಗೂರ್ಚಿ–ಕೂಡಿಸಿಕೊಂಡು (ಹಾಡಿ) ; ನಿನ್ನು (ನ್)–ನಿನ್ನನ್ನು ; ಸೊಕ್ಕಜೇಯು–ಕರವಶನಾಗುವಂತೆ ಮಾಡುವ ; ಧೀರುಡು–ಧೀರನು ; ಎವ್ವಡೋ–ಯಾರು ತಾನೆ ಇದ್ದಾನೆಯೋ ! ನಿಗಮ ಶಿರ ಅರ್ಥಮು–ವೇದಗಳ ಶಿರದಂತಿರುವ ಉಪನಿಷತ್ತುಗಳ ಅರ್ಥವನ್ನು ; ಗಲ್ಗಿನ–ಹೊಂದಿರುವ ; ನಿಜ ವಾಕ್ಕುಲತೋ–ಮಾತುಗಳಿಂದಲೂ ; ಸ್ವರ ಶುದ್ಧಮುತೋ–ಶುದ್ಧವಾದ ಸ್ವರಗಳಿಂದಲೂ ; ಯತಿ–ಯತಿಯುಂದಲೂ[1] ; ವಿಶ್ರಮ–ಅಲ್ಲಲ್ಲೇ ತೆರಪುಗಳಿಂದಲೂ ; ಸದ್ಭಕ್ತಿ–ಶುದ್ಧವಾದ ಭಕ್ತಿಯಿಂದಲೂ ; ವಿರತಿ–ವೈರಾಗ್ಯದಿಂದಲೂ ; ದ್ರಾಕ್ಷಾರಸ–ದ್ರಾಕ್ಷಾ ಪಾಕದಂತೆ[2] ಸರಳವಾದ ಶೈಲಿಗಳಿಂದಲೂ ; ನವರಸಯುತ–ಒಂಭತ್ತು ರಸ[3]ಗಳಿಂದಲೂ ಕೂಡಿ ಮಧುರವಾಗಿರುವ ; ಕೃತಿಚೇ–ಕೃತಿಗಳಿಂದ ; ಭಜಿಯಿಂಚು ಯುಕ್ತಿ–ನಿನ್ನನ್ನು ಭಜಿಸುವ ಯುಕ್ತಿಯು ; ಶ್ರೀ ರಾಮಚಂದ್ರ ! ತ್ಯಾಗರಾಜುನಿ ತರಮಾ–ತ್ಯಾಗರಾಜನಿಗೆ ಸಾಧ್ಯವಿದೆಯೇ ?

---

1 ಯತಿ–ಛಂದೋಬದ್ಧವಾಗಿ ಹಾಡುವಾಗ ತಾಳಕ್ಕೆ ತಕ್ಕಂತೆ ನಿಲ್ಲಿಸಬೇಕಾದ ಸ್ಥಳಗಳು. ಗಾಯನ ಮಧುರವಾಗ ಬೇಕಾದರೆ ಇದು ಅಗತ್ಯ.

2 ಶೈಲಿಯಲ್ಲಿನ ಸರಳತೆ, ಕಾಠಿಣ್ಯಗಳನ್ನು ಅವಲಂಬಿಸಿ ರಚನೆಗಳನ್ನು ನಾಲ್ಕು ವರ್ಗ ಮಾಡುತ್ತಾರೆ. ಬಾಯಿಗೆ ಹಾಕಿದ ಕೂಡಲೆ ಸ್ವಲ್ಪವೂ ಶ್ರಮವಿಲ್ಲದೆ ಕರಗಿ ರಸಬಿಡುವ ದ್ರಾಕ್ಷಿಯಂತೆ ಸುಲಭವಾಗಿ ಅರ್ಥವಾಗುವುದು ದ್ರಾಕ್ಷಾಪಾಕ. ಸ್ವಲ್ಪವೇ ಸಿಪ್ಪೆ ಸುಲಿದು ತಿನ್ನಬೇಕಾದ ಬಾಳೆಯ ಹಣ್ಣಿನಂತೆ ತುಸು ಶ್ರಮದಿಂದ ಅರ್ಥವಾಗುವುದು ಕದಳೀಪಾಕ. ತೆಂಗಿನಕಾಯಿನ ಜುಂಗು ತೆಗೆದು ಚಿಪ್ಪು ಒಡೆದು ತಿರುಳು ಸವಿಯಬೇಕಾಗುವ ಹಾಗೆ ನಿಘಂಟುಗಳ ಸಹಾಯ

**ಭಾವಾರ್ಥ :** ತಾಳ ಮೃದಂಗಾದಿಗಳೊಂದಿಗೆ ಮಧುರವಾಗಿ ಹಾಡಿ ನಿನ್ನನ್ನು ಮೆಚ್ಚಿಸುವ ಧೀರ ಯಾವನಿದ್ದಾನೆ ? ಉಪನಿಷತ್ತುಗಳ ಸಾರದಂತಿರುವ ಮಾತುಗಳನ್ನು ಹೊಂದಿ, ನಿಜವಾದ ಭಕ್ತಿ ವೈರಾಗ್ಯಗಳಿಂದ, ಯತಿ ವಿಶ್ರಮ ಮುಂತಾದ ನಿಯಮಗಳನ್ನು ಅನುಸರಿಸಿ, ಸರಳವೂ, ರಸಭರಿತವೂ ಆದ ಗೀತೆಗಳನ್ನು ಹಾಡುವವನು ಯಾರು ? ಅದು ಈ ತ್ಯಾಗರಾಜನಿಗೆ ಸಾಧ್ಯವಿದೆಯೆ ?

* * *

೬

ರಾಗ : ಶ್ರೀರಂಜನಿ ತಾಳ : ಆದಿ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಪರ್ವತರಾಜಕುಮಾರಿ ಪಾರ್ವತಿ ಪಾಹಿಮಾಂ ಪರಮೇಶ್ವರಿ (ಪರ್ವತ)

ಅನುಪಲ್ಲವಿ : ಸರ್ವಾನಂದಮಯ ಚಕ್ರವಾಸಿನಿ ಸದ್ಗುರುಗುಹ ಜನನಿ ಶ್ರೀರಂಜನಿ
ಶರ್ವಾಣಿ ಶಂಭುಮೋಹಿನಿ ಶರಚ್ಚಂದ್ರಿಕಾ ಧವಳ ಪ್ರಕಾಶಿನಿ (ಪರ್ವತ)

ಚರಣ : ಕೈಲಾಸಪುರ ವಿಲಸಿತ ಪ್ರಸಿದ್ಧ ಕಾಮೇಶ್ವರಿ ಕಂಜಲೋಚನಿ
ಕವಿ ಹೃದಯಾವೇಶಿನಿ ಪಾಶವಿಮೋಚನಿ ಪಾಕಶಾಸನಾದಿ ದೇವಪಾಲಿನಿ
ಕಾಳಿನಿ ತ್ರಿಪುರಾದಿಮರ್ದಿನಿ ಕಂದರ್ಪಜನಕಾಪಾಂಗವೀಕ್ಷಣಿ
ಕೈವಲ್ಯ ಪ್ರದಾಯಿನಿ ಕಾವ್ಯಾಲಾಪ ವಿನೋದಿನಿ ಮಂದಹಾಸಿನಿ (ಪರ್ವತ)

**ಪ್ರತಿಪದಾರ್ಥ :** ಪರ್ವತರಾಜನ ಮಗಳೂ, ಪರಮೇಶ್ವರನ ಮಡದಿಯೂ ಆದ ಪಾರ್ವತಿಯೇ, ಪಾಹಿಮಾಂ–ನನ್ನನ್ನು ಕಾಪಾಡು ; ಸರ್ವಾನಂದಮಯ–ಸಂಪೂರ್ಣವಾದ ಆನಂದದಿಂದ ತುಂಬಿದ ; ಚಕ್ರವಾಸಿನಿ–ಶ್ರೀ ಚಕ್ರದಲ್ಲಿ ನೆಲಸಿರುವವಳು ; ಸದ್ಗುರುಗುಹ ಜನನಿ–ಗುರುವಾದ ಗುಹ, ಷಣ್ಮುಖನ ತಾಯಿಯಾದವಳು ಪಾರ್ವತಿ ; ಶ್ರೀರಂಜನಿ–ಶುದ್ಧರೂಪದ ರಂಜನೆಯನ್ನುಂಟುಮಾಡುವವಳು ; ಶರ್ವಾಣಿ–ಶಿವನ ಪತ್ನಿ ; ಶಂಭು ಮೋಹಿನಿ–ಶಂಭುವಿನಿಂದ ಮೋಹಿತಳಾದವಳು ; ಶರಚ್ಚಂದ್ರಿಕಾ ಧವಳ ಪ್ರಕಾಶಿನಿ–ಶರತ್ಕಾಲದ ಬೆಳದಿಂಗಳಿನಂತೆ ಪ್ರಕಾಶಿಸುವವಳು ; ಕೈಲಾಸಪುರ ವಿಲಸಿತ–ಕೈಲಾಸಪುರದಲ್ಲಿ ಶೋಭಿಸುತ್ತಿರುವ ; ಪ್ರಸಿದ್ಧ ಕಾಮೇಶ್ವರಿ–ಪ್ರಸಿದ್ಧಳಾದ ಕಾಮೇಶ್ವರಿ ; ಕಂಜ–ತಾವರೆಯಂತೆ ; ಲೋಚನಿ–ಕಣ್ಣುಳ್ಳವಳು ; ಕವಿಹೃದಯಾವೇಶಿನಿ–ಕವಿಗಳ ಹೃದಯದಲ್ಲಿ ನೆಲಸುವವಳು ; ಪಾಶಮೋಚನಿ–ಸಾಂಸಾರಿಕ ಬಂಧನದಿಂದ ಬಿಡುಗಡೆ ಮಾಡುವವಳು ; ಪಾಕಶಾಸನಾದಿ

---

ದಿಂದ ಕಷ್ಟಪಟ್ಟು ಅರ್ಥಮಾಡಿಕೊಳ್ಳಬೇಕಾಗುವುದು ನಾರಿಕೇಳಪಾಕ. ಬಹು ಬಿರುಸಾದ ರಚನೆಗಳಿಂದ ಕಗ್ಗಂಟಾಗಿ, ಅರ್ಥ ಬಹು ಕಷ್ಟವಾಗುವುದು ಕಪಾಲಪಾಕ.

ಇಲ್ಲಿ ತ್ಯಾಗರಾಜರು ಸೊಗಸಾದ ಗಾಯನ ಹೇಗಿರಬೇಕು ಎನ್ನುವುದನ್ನು ನಿರೂಪಿಸುತ್ತಿದ್ದಾರೆ. ಅದು ದ್ರಾಕ್ಷಾಪಾಕದಲ್ಲಿರಬೇಕು. ಅದರಲ್ಲಿ ಯತಿ, ವಿಶ್ರಮಗಳಿರಬೇಕು, ಅದನ್ನು ಹಾಡುವಾಗ ವಿರತಿಯಿರಬೇಕು, ಸದ್ಭಕ್ತಿಯಿರಬೇಕು, ತಾಳ ಮೃದಂಗಗಳ ಜೊತೆಯಿರಬೇಕು. ಅದೀಗ ಭಗವಂತನಿಗೆ ಪ್ರಿಯವಾಗುವ ಗಾಯನ.

3 ನವರಸ_ಕಾವ್ಯವನ್ನು ಓದಿದರೆ ಹೇಗೋ ಹಾಗೆ ಸಂಗೀತವನ್ನು ಕೇಳಿದರೂ ಆನಂದದ ಅನುಭವವಾಗಬೇಕು. ಆ ಆನಂದಾನುಭವವೇ ರಸಾನುಭವ. ರಸಗಳು ಒಂಭತ್ತು ಬಗೆ ಎಂದು ವಿಂಗಡಿಸಿದ್ದಾರೆ. ಅವು ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ರಸಗಳು.

ದೇವ ಪಾಲಿನಿ–ಅಗ್ನಿಯೇ ಮೊದಲಾದ ದೇವತೆಗಳನ್ನು ಪಾಲಿಸುವವಳು ; ಕಾಳಿನಿ ; ತ್ರಿಪುರಾದಿ ಮರ್ದಿನಿ–ತ್ರಿಪುರಾಸುರರೇ ಮೊದಲಾದ ರಾಕ್ಷಸರನ್ನು ಸಂಹರಿಸಿದವಳು ; ಕಂದರ್ಪಜನಕ–ವಿಷ್ಣುವನ್ನು ; ಅಪಾಂಗ–ಕಡೆಗಣ್ಣಿನಿಂದ ನೋಡುವವಳು ; ಕೈವಲ್ಯ ಪ್ರದಾಯಿನಿ–ಮೋಕ್ಷವನ್ನು ಕೊಡುವವಳು ; ಕಾವ್ಯಾಲಾಪಗಳಿಂದ ವಿನೋದಪಡುವವಳು ; ಮಂದಹಾಸವುಳ್ಳವಳು. ಸರ್ವಾನಂದಮಯ ಚಕ್ರದಲ್ಲಿ ಆವಾಹಿಸಲ್ಪಟ್ಟು ಪೂಜಿಸಲ್ಪಡುವ ಹಿಮರಾಜನ ಕುವರಿಯೇ ನನ್ನನ್ನು ಕಾಪಾಡು.

* * *

೧೦

ರಾಗ : ಕೇದಾರಗೌಳ ತಾಳ : ರೂಪಕ

ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ನೀಲಕಂಠಂ ಭಜೇಹಂ ಸತತಂ ನೀರಜಾಸನಾದಿ ನುತಂ

ಅನುಪಲ್ಲವಿ : ಬಾಲಕುಚಾಂಬಾ ಸಹಿತಂ ಬಾಲಚಂದ್ರ ಸೇವಿತಂ
ಶೀಲ ಗುರುಗುಹ ಪೂಜಿತಂ ಶ್ರೀ ಕದಂಬವನ ನಾಥಂ (ನೀಲ)

ಚರಣ : ಅಕ್ಷಯರೂಪಾಖಂಡ ಕಾವೇರೀ ತೀರೋತ್ತರಾಭಿಮುಖಂ
ಪಂಚಮುಖಂ ರಕ್ಷಿತಭಕ್ತ ಪ್ರಮುಖಂ ನಕ್ಷತ್ರೇಶಶೇಖರಂ
ನಾಮರೂಪ ವಿಚಿತ್ರತರ ದಕ್ಷತರಂ ಈಶ್ವರಂ
ಕೇದಾರಗೌಳ ಪ್ರಿಯಕರಂ ದಕ್ಷಿಣಕಾಶೀಪುರಂ
ದಂಡಿತಕಾಮ ತ್ರಿಪುರಂ ದಕ್ಷಾಧ್ವರಹರಂ ಹರಂ
ದಯಾಕರಂ ಕಮಲಕರಂ (ನೀಲ)

**ಪ್ರತಿಪದಾರ್ಥ** : ಸತತಂ–ಯಾವಾಗಲೂ ; ನೀರಜಾಸನಾದಿ ನುತಂ–ಬ್ರಹ್ಮನೇ ಮೊದಲಾದವರಿಂದ ಸ್ತುತಿಸಲ್ಪಟ್ಟ ; ನೀಲಕಂಠಂ ಭಜೇಹಂ–ನೀಲಕಂಠನಾದ ಶಿವನನ್ನು ಭಜಿಸುತ್ತೇನೆ ; ಬಾಲಕುಚಾಂಬಾ ಸಹಿತಂ–ಬಾಲಕುಚಾಂಬಾ ಎಂಬ ಹೆಸರಿರುವ ಪಾರ್ವತಿಯೊಂದಿಗಿರುವವನೂ ; ಬಾಲಚಂದ್ರ ಸೇವಿತಂ–ಬಾಲಚಂದ್ರನಿಂದ ಸೇವಿಸಲ್ಪಡುವವನೂ ಆದ ; ಶೀಲ ಗುರುಗುಹ ಪೂಜಿತಂ–ಷಣ್ಮುಖನಿಂದ ಪೂಜೆಗೊಂಡ ; ಕದಂಬವನಕ್ಕೆ ಒಡೆಯನಾದ ನೀಲಕಂಠನನ್ನು ಭಜಿಸುತ್ತೇನೆ. ಅಕ್ಷಯರೂಪ–ಕ್ಷಯ ವಿಲ್ಲದ ರೂಪವುಳ್ಳವನು ; ಅಖಂಡ–ಪೂರ್ಣನಾದವನು ; ಕಾವೇರಿತೀರ ಉತ್ತರಾಭಿಮುಖಂ ಪಂಚಮುಖಂ–ಕಾವೇರಿ ತೀರದಲ್ಲಿ ಉತ್ತರಕ್ಕೆ ಮುಖಮಾಡಿದ ಆರು ಮುಖಗಳುಳ್ಳ ಈಶ್ವರ ; ರಕ್ಷಿತ ಭಕ್ತ ಪ್ರಮುಖಂ–ಭಕ್ತರನ್ನು ರಕ್ಷಿಸುವುದರಲ್ಲಿ ಪ್ರಮುಖನು ; ನಕ್ಷತ್ರೇಶ ಶೇಖರಂ–ಚಂದ್ರನನ್ನು ಮುಡಿಯಲ್ಲಿ ಧರಿಸಿದವನು ; ನಾಮರೂಪ ವಿಚಿತ್ರತರ ದಕ್ಷತರಂ ಈಶ್ವರಂ–ವಿಚಿತ್ರವಾದ ನಾಮ ರೂಪ ವೈವಿಧ್ಯದಿಂದ ದಕ್ಷನಾದ ಈಶ್ವರನು ; ಕೇದಾರಗೌಳವನ್ನು ಪ್ರೀತಿಸುವವನು ; ದಕ್ಷಿಣಕಾಶೀಪುರಂ–ದಕ್ಷಿಣಕಾಶಿ ಎನಿಸಿದ ರಾಮೇಶ್ವರದಲ್ಲಿರುವವನು ; ದಂಡಿತಕಾಮ ತ್ರಿಪುರಂ–ಕಾಮನನ್ನೂ ತ್ರಿಪುರವನ್ನೂ ಶಿಕ್ಷಿಸಿದವನು ; ದಕ್ಷ+ಅಧ್ವರಹರಂ–ದಕ್ಷನು ಮಾಡಿದ ಯಜ್ಞವನ್ನು ಹಾಳುಮಾಡಿದವನು ; ದಯಾಕರನು ; ಕಮಲಕರಂ–ತಾವರೆಯಂತೆ ಕೈಗಳುಳ್ಳವನೂ ಆದ ನೀಲಕಂಠ ನನ್ನು ಭಜಿಸುತ್ತೇನೆ.

* * *

೧೧

ರಾಗ : ಕೇದಾರಗೌಳ ತಾಳ : ಆದಿ ರಾಮನಾಡ್ ಶ್ರೀನಿವಾಸ ಅಯ್ಯಂಗಾರ್

ಪಲ್ಲವಿ : ಸರಗುನ ಪಾಲಿಂಪ ಸಮಯಮುರ
ನೀಕು ಸರಿಯೆವ್ವರುನ್ನಾರುರಾ ಸರಸಿಜನೇತ್ರ (ಸರಗುನ)

ಅನುಪಲ್ಲವಿ : ವರಗುಣ ಶೇಷಾದ್ರಿ ವರದ ವೆಂಕಟೇಶ್ವರ
ವನಜ ಸಂಭವನುತ ವರಮುಲೊಸಗಿ ನನ್ನು (ಸರಗುನ)

ಚರಣ : ಶತಧೃತಿಪೂಜಿತ ಗಜರಾಜುಡು ಮೊರಲಿಡಗ ಅನುಗ್ರಹಿಂಚಲೇದಾ
ಅತಿ ವ್ಯಥಜೆಂದಿನ ಪರಮಭಕ್ತುಡಗು ಪ್ರಹ್ಲಾದುನಿ ಮುನು ನೀವೆ ಬ್ರೋವಲೇದಾ
ಮನ್ಮಥಜನಕ ಹರುಷಮುನಕು ನಿಕೇತನ ಮಹನೀಯ ಶ್ರೀನಿವಾಸ ನೀದು ಸ
ತ್ಕಥಲನು ವಿನಿ ನಿನ್ನು ವೇಡಿತಿನಿ ಮನಸು ಕರಗಿ ನಾದು ಸಂಕಟಮುದೀರ್ಚ (ಸರಗುನ)

**ಪ್ರತಿಪದಾರ್ಥ :** ಸರಗುನ–ಶೀಘ್ರವಾಗಿ ; ಪಾಲಿಂಪ–ಕಾಪಾಡುವ ; ಸಮಯಮುರಾ–ಸಮಯ ಬಂದಿದೆಯಯ್ಯ ; ಸರಸಿಜನೇತ್ರ–ತಾವರೆಯಂತೆ ಕಣ್ಣುಳ್ಳವನೆ ; ನೀಕು–ನಿನಗೆ ; ಸರಿಯೆವ್ವರುನ್ನಾರುರಾ–ಸಮಾನರಾದವರು ಯಾರಿದ್ದಾರಯ್ಯ ! ವರಗುಣ–ಶ್ರೇಷ್ಠವಾದ ಗುಣವುಳ್ಳವನೆ ; ಶೇಷಾದ್ರಿ ವರದ ವೆಂಕಟೇಶ್ವರ–ಶೇಷಾದ್ರಿಯಲ್ಲಿ ನಿಂತು ವರಗಳನ್ನು ನೀಡಿ ಕಾಪಾಡುವ ವೆಂಕಟೇಶ್ವರನೆ ; ವನಜಸಂಭವ–ಬ್ರಹ್ಮನಿಂದ ; ನುತ–ಪೂಜಿತನಾದವನೆ ; ವರಮುಲೊಸಗಿ–ವರವನ್ನು ದಯಪಾಲಿಸಿ ; ನನ್ನು–ನನ್ನನ್ನು (ಶೀಘ್ರವಾಗಿ ಕಾಪಾಡು) ; ಗಜರಾಜುಡು–ಗಜೇಂದ್ರನು ; ಮೊರಲಿಡಗ–ಆರ್ತತೆಯಿಂದ ಮೊರೆಯಿಡಲು ; ಶತಧೃತಿ ಪೂಜಿತ–ಇಂದ್ರನಿಂದ (ನೂರು ಯಾಗಗಳನ್ನು ಮಾಡಿದವನಾದುದರಿಂದ ಇಂದ್ರನಿಗೆ ಶತಧೃತಿ ಎಂಬ ಹೆಸರು) ಪೂಜೆಗೊಂಡವನೆ ; ಅನುಗ್ರಹಿಂಚ ಲೇದಾ–ಅವನನ್ನು (ಕ್ರೂರವಾದ ಮೊಸಳೆಯ ಹಿಡಿತದಿಂದ ಪಾರುಮಾಡಿ) ಕಾಪಾಡಲಿಲ್ಲವೆ ; ಅತಿ ವ್ಯಥಜೆಂದಿನ–ಬಹಳವಾಗಿ ದುಃಖಪಡುತ್ತಿದ್ದ ; ಪರಮ ಭಕ್ತುಡಗು–ಶ್ರೇಷ್ಠ ಭಕ್ತನಾದ ; ಪ್ರಹ್ಲಾದುನಿ–ಪ್ರಹ್ಲಾದನನ್ನು ; ಮುನು–ಹಿಂದೆ ; ನೀವೆ ಬ್ರೋವಲೇದಾ–ನೀನೇ ಕಾಪಾಡಲಿಲ್ಲವೆ ? ; ಮನ್ಮಥಜನಕ–ಮನ್ಮಥನ ತಂದೆಯೆ ; ಹರುಷಮುನಕು ನಿಕೇತನ–ಸಂತೋಷಕ್ಕೆ ನಿಕೇತನನಾಗಿರುವವನೆ ; ಮಹನೀಯ ಶ್ರೀನಿವಾಸ, ನೀದು–ನಿನ್ನ ; ಸತ್ಕಥಲನು–ಸಚ್ಚರಿತ್ರೆಗಳನ್ನು ; ವಿನಿ–ಕೇಳಿ ; ನಿನು ವೇಡಿತಿನಿ–ನಿನ್ನನ್ನು ಬೇಡಿಕೊಳ್ಳುತ್ತಿದ್ದೇನೆ ; ಮನಸು ಕರಗಿ–ಅನುಕಂಪದಿಂದ ; ನಾದು–ನನ್ನ ; ಸಂಕಟಮು ದೀರ್ಚ–ಸಂಕಟವನ್ನು ಪರಿಹರಿಸಿ (ಶೀಘ್ರವಾಗಿ ಕಾಪಾಡಲು ತಕ್ಕ ಸಮಯವಾಗಿದೆ).

ಪ್ರಸಿದ್ಧ ವಾಗ್ಗೇಯಕಾರರಲ್ಲಿ ಒಬ್ಬರಾದ ರಾಮನಾಡ್ ಶ್ರೀನಿವಾಸಯ್ಯಂಗಾರ್ಯರು ಒಮ್ಮೆ ಜಾರಿಬಿದ್ದು ಕಾಲಿನ ಮೂಳೆಯು ಮುರಿದುಹೋದ ಸಂದರ್ಭದಲ್ಲಿ ಶೇಷಾದ್ರಿ ಅಂದರೆ, ತಿರುಮಲೆಯ ವೆಂಕಟೇಶ್ವರನನ್ನು ಕುರಿತು ಹೀಗೆ ಸ್ತುತಿಸಿದರಂತೆ. ಗಜೇಂದ್ರನ ಕಾಲಿಗೆ ಮೊಸಳೆಯಿಂದ ಬಂದಿದ್ದ ಅಪಾಯವನ್ನು ತಪ್ಪಿಸಿ ಕಾಪಾಡಿದಂತೆ ತನ್ನನ್ನೂ ಕಾಪಾಡುವಂತೆ ಪರಮಭಕ್ತಿಯಿಂದ ಸ್ತುತಿಸಿದರಂತೆ. ಅವರ ಕಾಲಿನ ತೊಂದರೆ ಪರಿಹಾರವಾಯಿತೆಂದು ಒಂದು ದಂತ ಕಥೆ.

ಈ ಕೃತಿಯ ಚರಣಗಳಲ್ಲಿ ಪುರಾಣಪ್ರಸಿದ್ಧವಾದ ಗಜೇಂದ್ರ ಮೋಕ್ಷದ ಸಂದರ್ಭವನ್ನೂ, ಪರಮ ಭಾಗವತೋತ್ತಮನೆಂದು ಪ್ರಖ್ಯಾತನಾದ ಪ್ರಹ್ಲಾದನನ್ನು ಹಿರಣ್ಯಕಶಿಪುವಿನ ಕಾಟದಿಂದ ಕಾಪಾಡಿದ ನರಸಿಂಹಾವತಾರದ ಕಥೆಯನ್ನೂ ಉಲ್ಲೇಖಿಸಿದ್ದಾರೆ.

* * *

೧೨

ರಾಗ : ಕೇದಾರಗೌಳ ತಾಳ : ಆದಿ ತ್ಯಾಗರಾಜರು

ಪಲ್ಲವಿ : ತುಳಸೀ ಬಿಲ್ವ ಮಲ್ಲಿಕಾದಿ ಜಲಜ ಸುಮ ಪೂಜಲ ಗೈಕೊನವೆ

ಅನುಪಲ್ಲವಿ : ಜಲಜಾಸನ ಸನಕಾದಿ ಕರಾರ್ಚಿತ
ಜಲದಾಭ ಸುನಾಭ ವಿಭಾಕರ ಹೃ
ಜ್ಜಲೇಶ ಹರಿಣಾಂಕ ಸುಗಂಧ (ತುಳಸೀ)

ಚರಣ : ಉರಮುನ ಮುಖಮುನ ಶಿರಮುನ ಭುಜಮುನ
ಕರಮುನ ನೇತ್ರಮುನ ಚರಣಯುಗಂಬುನ
ಕರುಣತೊ ನೆನರುತೋ ಪರಮಾನಂದಮುತೋ
ನಿರತಮುನು ಶ್ರೀ ತ್ಯಾಗರಾಜು ನಿರುಪಾಧಿಕುಡೈಯರ್ಚಿಂಚು (ತುಳಸೀ)

**ಪ್ರತಿಪದಾರ್ಥ :** ಜಲದಾಭ–ಮೇಘದಂತೆ ಶ್ಯಾಮಲನಾಗಿರುವವನೆ ; ಸುನಾಭ–ಸುಂದರವಾದ ನಾಭಿಯುಳ್ಳವನೆ ; ವಿಭಾಕರ–ಸೂರ್ಯನೆ (ಸೂರ್ಯನಂತೆ-ಶೋಭಿಸುವವನೆ) ; ಹೃಜ್ಜಲೇಶ ಹರಿಣಾಂಕ–ಹೃದಯವೆಂಬ ಸಮುದ್ರಕ್ಕೆ ಚಂದ್ರನಂತಿರುವವನೆ ; ಶ್ರೀರಾಮಚಂದ್ರ, ತುಳಸಿ, ಬಿಲ್ವಪತ್ರೆ, ಮಲ್ಲಿಗೆ, ಜಲಜ–ತಾವರೆ ಮೊದಲಾದ ; ಸುಮಪೂಜಲ–ಹೂವುಗಳಿಂದ ಮಾಡುವ ಪೂಜೆಯನ್ನು ; ಗೈಕೊನವೆ–ದಯವಿಟ್ಟು ಸ್ವೀಕರಿಸು. ಜಲಜಾಸನ–ಬ್ರಹ್ಮ ; ಸನಕಾದಿ–ಸನಕನೇ ಮೊದಲಾದವರ ; ಕರಾರ್ಚಿತ–ಕೈಗಳಿಂದ ಪೂಜಿತನಾದವನು ; ಶ್ರೀ ತ್ಯಾಗರಾಜು–ತ್ಯಾಗರಾಜನು ; ನಿರತಮುನು–ಯಾವಾಗಲೂ ; ನಿರುಪಾಧಿಕುಡೈ–ಉಪಾಧಿಯಿಲ್ಲದೆ (ಯಾವ ಕಾಂಕ್ಷೆಯೂ ಇಲ್ಲದವನಾಗಿ) ; ಉರಮುನ–ಎದೆಯನ್ನು ; ಮುಖಮುನ–ಮುಖವನ್ನು ; ಶಿರಮುನ–ತಲೆಯನ್ನು ; ಭುಜಮುನ–ಭುಜಗಳನ್ನು ; ಕರಮುನ–ಕೈಗಳನ್ನು ; ನೇತ್ರಮುನ–ಕಣ್ಣುಗಳನ್ನು ; ಚರಣಯುಗಂಬುನ–ಕಾಲುಗಳನ್ನು ; ಅರ್ಚಿಂಚು–ಪೂಜಿಸುತ್ತಿದ್ದಾನೆ ; ಕರುಣತೊ–ಕರುಣೆಯಿಂದ ; ನೆನರುತೊ–ಪ್ರೀತಿಯಿಂದ ; ಪರಮಾನಂದಮುತೋ–ಸಂತೋಷದಿಂದ ಸ್ವೀಕರಿಸು.

**ತಾತ್ಪರ್ಯ :** ಮೇಘದಂತೆ ಶ್ಯಾಮಲ ಸುಂದರನಾದ ಶ್ರೀ ರಾಮಚಂದ್ರ, ತುಲಸಿ, ಬಿಲ್ವ, ಮಲ್ಲಿಕಾ, ಜಲಜ ಮೊದಲಾದ ಹೂವುಗಳಿಂದ ಮಾಡುತ್ತಿರುವ ಈ ಪೂಜೆಯನ್ನು ಸ್ವೀಕರಿಸು. ಯಾವ ಉಪಾಧಿಯೂ ಇಲ್ಲದೆ ತ್ಯಾಗರಾಜನು ಸಲ್ಲಿಸುವ ಈ ಪೂಜೆ ನಿನಗೆ ಪ್ರೀತಿಯಾಗಲಿ.

* * *

೧೩

ರಾಗ : ಹರಿಕಾಂಭೋಜಿ ತಾಳ : ಆದಿ ತ್ಯಾಗರಾಜರು

ಪಲ್ಲವಿ : ದಿನಮಣಿವಂಶ ತಿಲಕ ಲಾವಣ್ಯ ದೀನಶರಣ್ಯ

ಪಲ್ಲವಿ : ಮನವಿನಿ ಬಾಗುಗ ಮದಿನಿ ದಲಂಚುಚು
ಚನುವುನನೇಲ ಚಾಲುಗಾ ಚಾಲು (ದಿನಮಣಿ)

ಚರಣ : ಶರ್ವವಿನುತ ನನು ಸಂರಕ್ಷಿಂಪನು
ಗರ್ವಮುಲೇಲೇ ಗಾಚುವಾರೆವರೇ
ನಿರ್ವಿಕಾರ ಗುಣ ನಿರ್ಮಲ ಕರಧೃತ
ಪರ್ವತ ತ್ಯಾಗರಾಜ ಸರ್ವಸ್ವಮ್ (ದಿನಮಣಿ)

**ಪ್ರತಿಪದಾರ್ಥ :** ದಿನಮಣಿವಂಶ–ಸೂರ್ಯವಂಶಕ್ಕೆ ; ತಿಲಕ–ತಿಲಕದ ಹಾಗೆ ಶ್ರೇಷ್ಠನಾದವನೆ ; ಲಾವಣ್ಯ–ಸುಂದರನಾದವನೆ ; ದೀನಶರಣ್ಯ–ದೀನರನ್ನು ಆದರಿಸುವವನೆ ; ಮನವಿನಿ–ನನ್ನ ಬಿನ್ನಹವನ್ನು ; ಮದಿನಿ–ಮನಸ್ಸಿನಲ್ಲಿ ; ಬಾಗುಗ–ಚೆನ್ನಾಗಿ ; ದ(ತ)ಲಂಚುಚು–ನೆನೆದು ; ಚನುವುನನ್–ಪ್ರೀತಿಯಿಂದ ; ಏಲು–ಕಾಪಾಡು ಚಾಲು–ಸಾಕು ; ಕಾ (ಗಾ) ಚಾಲು–(ನಾನಿನ್ನು) ಕಾಯಲಾರೆ ; ಶರ್ವವಿನುತ–ಶಿವನಿಂದ ಸ್ತುತನಾದವನೆ ; ನಿರ್ವಿಕಾರಗುಣ–ವಿಕಾರವಿಲ್ಲದ ಗುಣಪೂರ್ಣನೆ ; ಕಾಚುವಾರೆವರೆ–(ನನ್ನನ್ನು ರಕ್ಷಿಸುವವರು ಯಾರು ? ; ನನು ಸಂರಕ್ಷಿಂಪನು–ನನ್ನನ್ನು ರಕ್ಷಿಸಲು ; ಗರ್ವಮುಲು ಏಲ–ಗರ್ವವೇಕೆ ? ; ನಿರ್ಮಲ–ಶುದ್ಧನಾದ ; ಕರಧೃತ ಪರ್ವತ–ಕೈಯಲ್ಲಿ ಪರ್ವತವನ್ನು ಹಿಡಿದ (ಗೋವರ್ಧನ ಪರ್ವತವನ್ನು ಕೈಯಲ್ಲಿ ಹಿಡಿದಿದ್ದಕ್ಕೆ ಸೂಚನೆ) ; ತ್ಯಾಗರಾಜ ಸರ್ವಸ್ವಮ್–ನೀನೇ ತ್ಯಾಗರಾಜನ ಸರ್ವಸ್ವವಾಗಿದ್ದೀಯೆ.

**ತಾತ್ಪರ್ಯ :** ಸೂರ್ಯವಂಶಕ್ಕೆ ತಿಲಕದಂತೆ ಶ್ರೇಷ್ಠನಾದ ಶ್ರೀರಾಮಚಂದ್ರ, ನನ್ನ ಬಿನ್ನಹವನ್ನು ಆಲಿಸಿ ಪ್ರೀತಿಯಿಂದ ಕಾಪಾಡು. ಶಿವನಿಂದ ಸ್ತುತನಾದವನೂ, ವಿಕಾರವಿಲ್ಲದ ಗುಣಪೂರ್ಣನೂ ಆದ ನೀನಲ್ಲದೆ ನನ್ನನ್ನು ಕಾಪಾಡುವವರು ಬೇರೆ ಯಾರಿದ್ದಾರೆ ? ಕೈಬೆರಳಲ್ಲಿ ಪರ್ವತವನ್ನು ಹಿಡಿದ ಕೃಷ್ಣನೇ ನೀನು. ನನ್ನ ಸರ್ವಸ್ವವೂ ನೀನೇ ಆಗಿದ್ದೀಯೆ. ತಮ್ಮ ಆರಾಧ್ಯದೈವ ಶ್ರೀರಾಮಚಂದ್ರನನ್ನು ಸ್ತುತಿಸುವಾಗ, ನಡುವೆ ಇಲ್ಲಿ ತ್ಯಾಗರಾಜರು ಕೃಷ್ಣಾವತಾರಕ್ಕೆ ಸೂಚನೆ ಕೊಟ್ಟಿದ್ದಾರೆ.

* * *

೧೪

ರಾಗ : ಹರಿಕಾಂಭೋಜಿ ತಾಳ : ಆದಿ ತ್ಯಾಗರಾಜರು

ಪಲ್ಲವಿ : ಎಂತರಾನೀ ತನಕೆಂತ ಪೋನೀ ಜೆಂತವಿಡುವಜಾಲ ಶ್ರೀರಾಮ

ಅನುಪಲ್ಲವಿ : ಅಂತಕಾರಿ ನೀ ಜೆಂತಜೇರಿ ಹನುಮಂತುಡೈ ಕೊಲುವಲೇದಾ

ಚರಣ : 1. ಶೇಷುಡು ಶಿವನಿಕಿ ಭೂಷುಡು ಲಕ್ಷ್ಮಣ
ವೇಷಿಯೈ ಕೊಲುವಲೇದಾ

2. ಶಿಷ್ಯುಡು ಮೌನಿ ವರಿಷ್ಠುಡು ಗೊಪ್ಪ
ವಸಿಷ್ಠುಡು ಹಿತುಡು ಕಾಲೇದಾ

3. ನರವರ ನೀಕೈ ಸುರಗಣಮುಲು
ವಾನರುಲೈ ಕೊಲುವಲೇದಾ

4. ಆಗಮೋಕ್ತಮು ನೀ ಗುಣಮುಲ
ಶ್ರೀ ತ್ಯಾಗರಾಜು ಪಾಡಗಲೇದಾ (ಎಂತರಾನೀ)

**ಪ್ರತಿಪದಾರ್ಥ :** ಶ್ರೀರಾಮಚಂದ್ರ, ತನಕು–ನನಗೆ ; ಎಂತ ರಾನೀ–ಎಂತಹ ಸುಖದುಃಖಗಳು ಬಂದರೂ ; ಎಂತ ಪೋನೀ–ಎಂಥವುಗಳು ಹೋದರೂ ಸರಿ ; ನೀ ಜೆಂತ(ನ್)–ನಿನ್ನ ಹತ್ತಿರವೇ ಇರುವುದನ್ನು ; ವಿಡುವಜಾಲ–ಬಿಡಲಾರೆ ; ಅಂತಕಾರಿ–ರುದ್ರನು ; ನೀ ಜೆಂತಜೇರಿ–ನಿನ್ನ ಸಮೀಪದಲ್ಲಿದ್ದುಕೊಂಡೇ ; ಹನುಮಂತುಡೈ–ಹನುಮಂತನಾಗಿ ; ಕೊಲುವಗಲೇದಾ–ಸೇವೆ ಮಾಡಲಿಲ್ಲವೆ ? ಶಿವನಿಕಿ–ಪರಮೇಶ್ವರನಿಗೆ ; ಭೂಷುಡು–ಆಭರಣನಾಗಿರುವ ; ಶೇಷುಡು–ಆದಿಶೇಷನು ; ಲಕ್ಷ್ಮಣವೇಷಿಯೈ–ಲಕ್ಷ್ಮಣನ ರೂಪದಲ್ಲಿ ಬಂದು ; ಕೊಲುವಲೇದಾ–ನಿನ್ನನ್ನು ಸೇವಿಸಲಿಲ್ಲವೆ ? ಶಿಷ್ಯುಡು–ಶಿಷ್ಯರಾದ ; ಮೌನಿವರಿಷ್ಠುಡು–ಮುನಿಶ್ರೇಷ್ಠರಾದ ; ಗೊಪ್ಪ ವಸಿಷ್ಠುಡು–ಹಿರಿಯರಾದ ವಸಿಷ್ಠಮುನಿಗಳು ; ಹಿತುಡು ಕಾಲೇದಾ–ನಿನಗೆ ಹಿತವನ್ನು ಹೇಳುವವರಾಗಲಿಲ್ಲವೆ ? ನರವರ–ನರಶ್ರೇಷ್ಠನಾದವನೆ ; ನೀಕೈ–ನಿನ್ನ ಕಾರ್ಯಕ್ಕಾಗಿ ; ಸುರಗಣಮುಲು–ದೇವತೆಗಳು ; ವಾನರುಲೈ–ವಾನರರಾಗಿ ; ಕೊಲುವಗಲೇದಾ–ಸೇವೆ ಮಾಡಲಿಲ್ಲವೆ ? ಆಗಮೋಕ್ತಮುಗು–ವೇದೋಕ್ತನಾದ ; ನೀ–ನಿನ್ನ ; ಗುಣಮುಲು–ಗುಣಗಳನ್ನು ; ತ್ಯಾಗರಾಜು–ತ್ಯಾಗರಾಜನು ; ಪಾಡಗಲೇದಾ–ಹಾಡಲಿಲ್ಲವೆ ?

**ಸಾರಾಂಶ :** ಶ್ರೀರಾಮಚಂದ್ರ, ನನಗೆ ಏನು ಬಂದರೂ ಸರಿ, ಏನು ಹೋದರೂ ಸರಿ, ನಿನ್ನ ಸಾನ್ನಿಧ್ಯದಲ್ಲಿ ಇರುವ ಅನುಗ್ರಹ ಒಂದು ಸಾಕು. ಸಾಕ್ಷಾತ್ ರುದ್ರನೇ ಹನುಮಂತನ ರೂಪದಲ್ಲಿ ನಿನ್ನ ಬಳಿ ಇದ್ದುಕೊಂಡು ಸೇವೆ ಮಾಡಿದನು. ಶಿವನಿಗೆ ಭೂಷಣವಾದ ಆದಿಶೇಷನೇ ಲಕ್ಷ್ಮಣನ ರೂಪದಲ್ಲಿ ನಿನ್ನ ಬಳಿ ಇದ್ದು ಸೇವೆ ಮಾಡಿದನು. ಮುನಿಶ್ರೇಷ್ಠರಾದ ವಸಿಷ್ಠಮಹರ್ಷಿಗಳೇ ನಿನ್ನ ಬಳಿ ಇದ್ದುಕೊಂಡು ನಿನಗೆ ಹಿತ ಹೇಳುವ ಕೆಲಸ ಮಾಡಿದರು ; ಸಕಲ ದೇವತೆಗಳೂ ವಾನರರ ರೂಪದಲ್ಲಿ ನಿನ್ನ ಸಮೀಪದಲ್ಲಿದ್ದು ಸೇವೆ ಮಾಡಿದರು. ಇಂತಹ ಶ್ರೇಷ್ಠನಾದ ನಿನ್ನ ಗುಣಗಳನ್ನು ತ್ಯಾಗರಾಜನು ಹಾಡಿದನು.

* * *

೧೫

ರಾಗ : ಹರಿಕಾಂಬೋಧಿ ತಾಳ : ಆದಿ ತ್ಯಾಗರಾಜರು

ಪಲ್ಲವಿ : ಚನಿತೋಡಿ ತೇವೆ ! ಓ ಮನಸಾ !

ಅನುಪಲ್ಲವಿ : ಕನಿಕರಮುತೋಗನಿ ಕರಮಿಡಿ ಚಿರ
ಕಾಲಮು ಸುಖಮನುಭವಿಂಪ ವೇಗಮೆ

ಚರಣ : ಪತಿತುಲ ಬ್ರೋಚು ಪಟ್ಟಾಧಿಕಾರಿನಿ
ಪರಮಾರ್ಥ ಪಥ ವಸಿಷ್ಠಾನುಸಾರಿನಿ
ದ್ಯುತಿ ನಿರ್ಜಿತ ಶಾತ ಶಾತಂಬರಾರಿನಿ
ಧುರೀಣ ತ್ಯಾಗರಾಜ ಹೃಚ್ಚಾರಿನಿ (ಚನಿತೋಡಿ)

**ಪ್ರತಿಪದಾರ್ಥ :** ಓ ಮನಸಾ–ಮನಸ್ಸೆಂಬ ದೂತಿಯೆ ; ಚನಿತೋಡಿ–ವೇಗವಾಗಿ ಹೋಗಿ ; ತೇವೆ–ಕರೆದು ಕೊಂಡು ಬಾ ; ಕನಿಕರಮುತೋ ಗನಿ–(ನನ್ನಮೇಲೆ) ಕನಿಕರದಿಂದ ಹೋಗಿ ; ಕರಮಿಡಿ–ಕೈಗಳನ್ನು ಹಿಡಿದು (ಕರೆದುಕೊಂಡು ಬಾ). ಚಿರಕಾಲಮು–ಯಾವಾಗಲೂ ; ಸುಖಮನುಭವಿಂಪ ವೇಗಮೆ–ಅವನೊಂದಿಗೆ ಸುಖವನ್ನು ಅನುಭವಿಸಬೇಕು ನಾನು ; ಪತಿತುಲ–ಪಾಪಿಗಳನ್ನು ; ಬ್ರೋಚು ಪಟ್ಟಾಧಿಕಾರಿನಿ–ಕಾಪಾಡುವ ಅಧಿಕಾರ ಪಡೆದ ಅವನನ್ನು ; ಪರಮಾರ್ಥಪಥ–ಅಧ್ಯಾತ್ಮ ಪಥದಲ್ಲಿ ; ವಸಿಷ್ಠಾನುಸಾರಿನಿ–ಪೂಜ್ಯ ವಸಿಷ್ಠರ ಶಿಷ್ಯನಾಗಿ ಅವರನ್ನು ಅನುಸರಿಸಿದವನನ್ನು ; ದ್ಯುತಿ–ತನ್ನ ದೇಹಕಾಂತಿಯಿಂದ ; ನಿರ್ಜಿತ ಶಾತ ಶಾತಂಬರಾರಿನಿ–ನೂರು ಸಾವಿರ ಮನ್ಮಥರನ್ನು ಸೋಲಿಸಿದವನನ್ನು ; ಧುರೀಣ–ನಿಷ್ಠಾವಂತನಾದ ; ತ್ಯಾಗರಾಜ ಹೃಚ್ಚಾರಿನಿ–ತ್ಯಾಗರಾಜನ ಹೃದಯದಲ್ಲಿ ಸಂಚರಿಸುವ ಶ್ರೀರಾಮಚಂದ್ರನನ್ನು (ಬೇಗ ಹೋಗಿ ಕೈಹಿಡಿದು ಕರೆದುಕೊಂಡು ಬಾ).

**ತಾತ್ಪರ್ಯ :** ಎಲೈ ಮನಸ್ಸೆ, ಬೇಗ ಹೋಗಿ ನನ್ನ ದೈವವನ್ನು ಕರೆದುಕೊಂಡು ಬಾ. ಯಾವಾಗಲೂ ಅವನೊಂದಿಗೆ ಇದ್ದು ನಾನು ಸುಖವನ್ನು ಅನುಭವಿಸಬೇಕು. ನನ್ನಮೇಲೆ ಕರುಣೆಯಿಂದ ಬೇಗ ಹೋಗಿ ಕೈಹಿಡಿದು ಕರೆದು ತಾ. ಪಾಪಿಗಳನ್ನು ಉದ್ಧಾರ ಮಾಡುವ, ವಸಿಷ್ಠಮುನಿಯ ಶಿಷ್ಯನಾದ, ದೇಹಕಾಂತಿಯಿಂದ ನೂರುಸಾವಿರ ಮನ್ಮಥರನ್ನು ಧಿಕ್ಕರಿಸುವ, ತ್ಯಾಗರಾಜನ ಹೃದಯಸಂಚಾರಿಯಾದ ಶ್ರೀರಾಮಚಂದ್ರ ಮೂರ್ತಿಯನ್ನು ಬೇಗನೆ ಕರೆದುಕೊಂಡು ಬಾ.

* * *

೧೬

ರಾಗ : ಕೇದಾರ ತಾಳ : ರೂಪಕ

ಆನಯ್ಯ

ಪಲ್ಲವಿ : ಭಜನ ಸೇಯವೇ ಓ ಮನಸಾ ಪ್ರಣತಾರ್ಥಿಹರುನಿ

ಅನುಪಲ್ಲವಿ : ಅಜಪುರಂದರಾದುಲಕು ಆದಿಗಾವೆಲಯು ಮೂರ್ತಿನಿ

ಚರಣ : 1. ಕಪಟನಾಟಕ ಸೂತ್ರಮುನ ಕಟ್ಟುಬಡಿ ಕಷ್ಟಮುಚೆಂದಗ
ಜಪತಪಮುಲ ಸಾಧನಚೇ ಚಂಚಲಮು ದೀರ್ಚಿ ಸದಾ

2. ಅಂಬರಕೇಶ ದಿಗಂಬರ ಕರುಣಾಕರುನಿ
ಅಂಬಿಕಾರಮಣುನಿ ಪಾದಾಂಬುಜಮುನ ಮದಿಬೂನಿ

3. ಉಮಾದಾಸು ಕುಲಧನಮ್ಮೈ ಊರ್ಜಿತಂಬುಗಾವೆಲಸಿನ
ಕುಮಾರ ಗಜಮುಖನಿಕನ್ನ ಕುಂದರದನುನಿ ಗುರಿಂಚಿ

**ಪ್ರತಿಪದಾರ್ಥ :** ಓ ಮನಸಾ–ಎಲೈ ಮನಸ್ಸೇ ; ಪ್ರಣತಾರ್ಥಿಹರುನಿ–ಭಕ್ತರ ದುಃಖಗಳನ್ನು ಪರಿಹರಿಸುವ ಪರಮೇಶ್ವರನನ್ನು ; ಭಜನಸೇಯವೇ–ಭಜನೆಮಾಡು ; ಅಜ–ಬ್ರಹ್ಮ; ಪುರಂದರ–ಇಂದ್ರ ; ಆದುಲಕು–ಮುಂತಾದವರಿಗೆ ; ಆದಿಗಾವೆಲಯು ಮೂರ್ತಿನಿ–ಆದಿಮೂರ್ತಿಯಾಗಿರುವ ಶಿವನನ್ನು (ಭಜಿಸು) ; ಕಪಟನಾಟಕ ಸೂತ್ರಮುನ–ಕಪಟನಾಟಕವೆಂಬ ಜಾಲದಲ್ಲಿ ; ಕಟ್ಟುಬಡಿ–ಸಿಕ್ಕಿಬಿದ್ದು, ಕಟ್ಟುಬಿದ್ದು ; ಕಷ್ಟಮು ಚೆಂದಗ–ಕಷ್ಟಪಡದೆ ; ಜಪ ತಪಮುಲ–ಜಪ ತಪಸ್ಸುಗಳೆಂಬ ; ಸಾಧನಚೇ–ಸಾಧನೆಯಿಂದ ; ಚಂಚಲಮು–(ಮನಸ್ಸಿನ) ಚಾಂಚಲ್ಯವನ್ನು ದೀರ್ಚಿ–ಕಳೆದು ಸದಾ–ಯಾವಾಗಲೂ ಭಜನೆ ಮಾಡು. ಅಂಬರಕೇಶ–ಆಕಾಶವೇ ಕೇಶವಾಗಿರುವವನೂ ; ದಿಗಂಬರ–ದಿಕ್ಕುಗಳೇ ವಸ್ತ್ರವಾಗಿರುವವನೂ ; ಕರುಣಾಕರುನಿ–ಕರುಣೆಗೆ ಆಕರನಾಗಿರುವವನೂ ; ಅಂಬಿಕಾರಮಣನೂ ಆದ ಶಿವನಲ್ಲಿ ; ಮದಿಬೂನಿ–ಮನಸ್ಸಿಟ್ಟು (ಭಜನೆಮಾಡು). ಉಮಾದಾಸು ಕುಲಧನಮ್ಮೈ–ಉಮಾದಾಸನ ಕುಲಧನವು ; ಊರ್ಜಿತಂಬುಗಾವೆಲಸಿನ-ಅಭಿವೃದ್ಧಿಯಾಗುತ್ತಿರುವಂತೆ ಮಾಡಿರುವ ; ಕುಮಾರ ಗಜಮುಖನಿಕನ್ನ–ಷಣ್ಮುಖ, ಗಜಮುಖರಿಗೆ ಹಿರಿಯನಾದ ; ಕುಂದರದನುನಿ–ಮಲ್ಲಿಗೆಯಂತೆ ಶುಭ್ರವಾದ ಹಲ್ಲುಗಳುಳ್ಳ ಶಿವನನ್ನು ; ಗುರಿಂಚಿ–ಗುರಿಯಾಗಿಟ್ಟುಕೊಂಡು ; ಎಲೆ ಮನಸ್ಸೆ, ಭಜನೆಮಾಡು.

**ತಾತ್ಪರ್ಯ :** ಬ್ರಹ್ಮ, ಇಂದ್ರ ಮೊದಲಾದ ಸಕಲ ದೇವತೆಗಳಿಗೂ ಆದಿಮೂರ್ತಿಯಾದ ಭಕ್ತರ ದುಃಖಗಳನ್ನು ಹೋಗಲಾಡಿಸುವ ಪರಮೇಶ್ವರನನ್ನು ಭಜನೆಮಾಡು, ಎಲೆ ಮನಸ್ಸೇ, ಭಜನೆಮಾಡು. ಈ ಜಗತ್ತಿನ ಕಪಟನಾಟಕ ಜಾಲದಲ್ಲಿ ಕಟ್ಟುಬೀಳಬೇಡ, ಕಷ್ಟಪಡಬೇಡ. ಜಪತಪಾದಿ ಸಾಧನೆಗಳಿಂದ ಚಂಚಲತೆಯನ್ನು ಹೋಗಲಾಡಿಸಿಕೊಂಡು ಅವನನ್ನು ಭಜಿಸು. ಆಕಾಶವೇ ಸಿರಿಮುಡಿಯಾದವನೂ, ದಿಕ್ಕುಗಳೇ ಅಂಬರವಾದವನೂ, ಕರುಣಾಕರನೂ, ಅಂಬಿಕಾರಮಣನೂ ಆದ ಶಿವನನ್ನು ; ಉಮಾದಾಸನ ಕುಲಧನನಾದ, ಅವನ ಶ್ರೇಯೋಭಿವೃದ್ಧಿಗಳಿಗೆ ಕಾರಣನಾದ, ಷಣ್ಮುಖ ಗಜಮುಖರಿಗೆ ಹಿರಿಯನಾದ ಪರಮಶಿವನನ್ನು ಭಜಿಸು.

* * *

## ೧೭

ರಾಗ : ಕೇದಾರ ತಾಳ : ಆದಿ ತ್ಯಾಗರಾಜರು

ಪಲ್ಲವಿ : ರಾಮಾ ನೀಪೈ ತನಕು ಪ್ರೇಮಬೋದು ಸೀತಾ (ರಾಮಾ)

ಅನುಪಲ್ಲವಿ : ತಾಮರಸನಯನ ನೀದೇವೋ ಮಾಯಗಾನಿ (ರಾಮಾ)

ಚರಣ : 1. ಮನಸು ನೀ ಪದಮುಲನೇ ಜೇರ
ಕನುಲ ನೀ ರೂಪಮುನೇಗೋರ ವಿನುನೀ ಪೇರುಲಕೇನೋರೂರಗಕೇ (ರಾಮಾ)

2. ಜನನಿ ಜನಕ ಆಪ್ತುಲನ್ಯುಲು ಧನಕನಕ ಗುರುವೇಲ್ಪುಲು
ದಿನಮು ನೀವೇಯನು ಮಾಟಲು ಅನಗಾನವಿ ನಾ ಭೂಷಣಮುಲು (ರಾಮಾ)

3. ಭೋಗಾನುಭವಮುಲಂದು ಬಾಗುಗ ಬುದ್ಧಿ ನೀಯಂದು
ತ್ಯಾಗರಾಜುನಿ ಹೃದಯಮಂದು ವಾಗೀಶಾನಂದಮಂದು (ರಾಮಾ)

**ಪ್ರತಿಪದಾರ್ಥ :** ಸೀತಾರಾಮ, ನೀಪೈ–ನಿನ್ನಮೇಲೆ ; ತನಕು(ನ್)–ನನಗೆ ; ಪ್ರೇಮಬೋದು–ಪ್ರೀತಿಯು ಹೋಗುವುದಿಲ್ಲ ; ತಾಮರಸನಯನ–ತಾವರೆಯಂತೆ ಕಣ್ಣುಳ್ಳ ಸೀತಾರಾಮನೆ ; ನೀದೇವೋ ಮಾಯಗಾನಿ–ಇದು ನಿನ್ನದೇ ಏನೋ ಮಾಯೆಯಾಗಿರಬೇಕು ; ಮನಸು–ನನ್ನ ಮನಸ್ಸು ; ನೀ ಪದಮುಲನೇ ಜೇರ–ನಿನ್ನ ಪಾದಗಳನ್ನೇ ಸೇರಲು ; ಕನುಲು–ಕಣ್ಣುಗಳು ; ನೀ ರೂಪಮುನೇಗೋರ–ನಿನ್ನ ರೂಪವನ್ನೇ ಆಸೆಪಡುತ್ತಿರಲು ; ವಿನುನೀ ಪೇರುಲಕೇ–ನಿನ್ನ ಹೆಸರನ್ನು ಕೇಳಿಯೇ ; ನೋರೂರ–ಬಾಯಲ್ಲಿ ನೀರೂರುತ್ತಿರಲು ; ನಿನ್ನಮೇಲೆ ನನಗೆ ಪ್ರೀತಿಯು ಹೋಗುವುದೆಂತು ? ಜನನಿ ಜನಕ ಆಪ್ತರು ಅನ್ಯರು ಧನ ಕನಕ ಗುರು ; ವೇಲ್ಪುಲು–ದೇವತೆಗಳು ; ನೀವೇ–ನೀನೇ ಅಲ್ಲದೆ ಬೇರೆಯಲ್ಲ ; ಅನು ಮಾಟಲು–ಎಂಬ ಮಾತುಗಳು ; ದಿನಮು–ಪ್ರತಿದಿನವೂ ; ನಾ ಭೂಷಣಮುಲು–ನನ್ನ ಆಭರಣಗಳಾಗಿರುವಾಗ ನಿನ್ನಮೇಲಿನ ಪ್ರೀತಿ ಹೋಗುವುದಿಲ್ಲ. ಭೋಗಾನುಭವಮುಲಂದು–(ಶರೀರ) ಸುಖಾನುಭವದಲ್ಲಿರುವಾಗಲೂ ; ಬಾಗುಗ–ಚೆನ್ನಾಗಿ ; ಬುದ್ಧಿ ನೀಯಂದು–ಬುದ್ಧಿಯು ನಿನ್ನಲ್ಲಿ ನೆಟ್ಟಿರಲು ; ತ್ಯಾಗರಾಜುನಿ ಹೃದಯಮಂದು–ತ್ಯಾಗರಾಜನ ಹೃದಯದಲ್ಲಿ ; ವಾಗೀಶಾನಂದಮಂದು–ಬ್ರಹ್ಮಾನಂದವು ನೆಲಸಿರುವಾಗ ನಿನ್ನಮೇಲೆ ಪ್ರೀತಿಯು ಕಡಮೆಯಾಗುವುದಿಲ್ಲ.

**ತಾತ್ಪರ್ಯ :** ಭಕ್ತ ಭಗವಂತನನ್ನು ಪ್ರೀತಿಸುತ್ತಾನೆ. ಅವನ ದೇಹ ಬುದ್ಧಿ ಮನಸ್ಸು ಸಕಲವೂ ಭಗವಂತನನ್ನು ಪ್ರೀತಿಸಿ ಆನಂದವನ್ನು ಪಡೆಯುತ್ತವೆ. ಅದು ಅತ್ಯಂತ ಶ್ರೇಷ್ಠತಮವಾದ ವಾಗೀಶಾನಂದ ಅಥವಾ ಬ್ರಹ್ಮಾನಂದ. ಅವನ್ನು ಪಡೆದ ಭಕ್ತನು ಇನ್ನು ಭಗವಂತನಲ್ಲಿ ಪ್ರೀತಿ ಕಳೆದುಕೊಳ್ಳುವುದು ಎಂಬ ವಿಚಾರವೇ ಇರಲು ಎಡೆಯಿಲ್ಲ. ಅವನ ಕಣ್ಣು, ನಾಲಗೆ, ಕಿವಿ, ಮನಸ್ಸು, ಬುದ್ಧಿ ಎಲ್ಲವೂ ಭಗವಂತನನ್ನು ಪ್ರೀತಿಸುತ್ತವೆ. [" ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ " ಎಂಬ ಬಸವೇಶ್ವರರ ವಚನವನ್ನು ಇಲ್ಲಿ ನೆನೆಯಬಹುದು.]

* * *

## ೧೮

ರಾಗ : ಕೇದಾರ ತಾಳ : ಆದಿ

ತ್ಯಾಗರಾಜರು

ಪಲ್ಲವಿ : ಮರಚೇವಾಡನಾ, ರಾಮ ನಿನ್ನು ಮದನ ಜನಕ (ಮರಚೇ)

ಅನುಪಲ್ಲವಿ : ಮರಕತಾಂಗ ನೀಯೊಕ್ಕ ಮದಿ ನೆಂಚವಲದು (ಮರಚೇ)

ಚರಣ : ಕಾನಿ ಮಾನವುಲು ಕರುಣಲೇಕ ನಾಪೈ
ಲೇನಿ ನೇರಮುಲೆಂಚಿನಗಾನಿ
ಶ್ರೀ ನಿಜಮುಗ ನಾ ಚೆಂತಜೇರಿನಗಾನಿ
ರಾನಿ ನೀದಯ ತ್ಯಾಗರಾಜನುತ (ಮರಚೇ)

**ಪ್ರತಿಪದಾರ್ಥ :** ಶ್ರೀರಾಮಚಂದ್ರ, ಮದನಜನಕ, ನಿನ್ನು–ನಿನ್ನನ್ನು ; ಮರಚೇವಾಡನಾ–ನಾನು ಮರೆಯು ಮಂಥವನೆ ? (ಮರೆಯಬಲ್ಲೆನೆ ?) ; ಮರಕತಾಂಗ–ಪಚ್ಚೆಯಂತೆ ಮೈ ಬಣ್ಣವುಳ್ಳ ಶ್ರೀರಾಮನೆ ; ನೀಯೊಕ್ಕಮದಿನಿ– ನಿನ್ನ ಮನಸ್ಸಿನಲ್ಲಿ ; ಎಂಚವಲ–ಹಾಗೆಂದುಕೊಳ್ಳಬೇಡ. ಕಾನಿ ಮಾನವುಲು–(ನನಗೆ) ಆಗದ ಜನರು ; ಕರುಣಲೇಕ– ಕರುಣೆಯಿಲ್ಲದೆ ; ನಾಪೈ–ನನ್ನಮೇಲೆ ; ಲೇನಿ ನೇರಮು–ಇಲ್ಲದ ದೋಷಗಳನ್ನು ; ಎಂಚಿನಗಾನಿ–ಎತ್ತಿ ತೋರಿಸಿದರು ; ಶ್ರೀ–ಸಂಪತ್ತು ; ನಿಜಮುಗ–ನಿಜವಾಗಿ ; ನಾ ಚೆಂತ–ನನ್ನ ಬಳಿ ; ಜೇರಿನಗಾನಿ–ಸೇರಿದರೂ ;; ರಾನಿ–ಬಿಟ್ಟರೂ ; ತ್ಯಾಗರಾಜನುತ ನೀ ದಯ–ತ್ಯಾಗರಾಜನಿಂದ ಸ್ತುತಿಸಲ್ಪಟ್ಟ ಶ್ರೀರಾಮ, ಅದು ನಿನ್ನ ದಯೆ. ಹೀಗಿರುವಾಗ ನಾನು ನಿನ್ನನ್ನು ಮರೆಯುತ್ತೇನೆಯೆ ?

**ತಾತ್ಪರ್ಯ :** ಮದನಜನಕ ಶ್ರೀರಾಮಚಂದ್ರ, ನಿನ್ನನ್ನು ನಾನು ಮರೆಯಬಲ್ಲೆನೆ ? ದಯವಿಟ್ಟು ಹಾಗೆಂದುಕೊಳ್ಳ ಬೇಡ. ನನ್ನನ್ನು ಕಂಡರೆ ಆಗದ ಜನರು ನಿಷ್ಕರುಣೆಯಿಂದ ನನ್ನ ಮೇಲೆ ದೋಷಗಳನ್ನು ಎತ್ತಿಹಾಕಿದರು. ನನಗೆ ಸಂಪತ್ತು ಬರಲಿ ಬಿಡಲಿ, ಅದು ನಿನ್ನ ದಯೆ. ಹೀಗಿರುವಾಗ ನಾನು ನಿನ್ನನ್ನು ಎಂದಿಗೂ ಮರೆಯಲಾರೆ.

* * *

## ೧೯

ರಾಗ : ಬಿಲಹರಿ ತಾಳ : ಆದಿ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಕಾಮಾಕ್ಷಿ ಶ್ರೀ ವರಲಕ್ಷ್ಮಿ ಶ್ರೀ ಕಮಲಾಕ್ಷಿ ಜಯಲಕ್ಷ್ಮಿ ಶ್ರೀ (ಕಾಮಾಕ್ಷಿ)

ಅನುಪಲ್ಲವಿ : ಕಾಮಜನಕ ಪೂರ್ಣಫಲೇ ಸಫಲೇ
ಕಾಮಿತಾರ್ಥದಾಯಿನಿ ಶ್ರೀಫಲೇ
ಕಾಮಕಲೇ ವಿಮಲೇ ಕರಕಮಲೇ
ಕಾಮಕೋಟಿ ಬಿಲಹರಿನುತ ಕಮಲೇ (ಕಾಮಾಕ್ಷಿ)

ಚರಣ : ದಿನಕರ ಕೋಟಿ ಪ್ರಕಾಶಕಾಯೆ ದೇದೀಪ್ಯಮಾನ ದಿವ್ಯಚ್ಛಾಯೇ
ವನಜಾಸನಾದಿ ವಂದಿತ ಮಾಯೆ ವಾಸುದೇವ ಪರಬ್ರಹ್ಮಜಾಯೆ
ಮನನಧ್ಯಾನ ಧ್ಯಾತೃ ಧ್ಯೇಯೆ ಮಹನೀಯ ಸಾಮ್ರಾಜ್ಯ ಪ್ರದಾಯೆ
ಸನಕ ಸನಂದನಾದಿಭಿರ್ಜ್ಞೇಯೆ ಸದಯೇ ಸರಸ ಗುರುಗುಹ ಸಹಾಯೇ (ಕಾಮಾಕ್ಷಿ)

**ಪ್ರತಿಪದಾರ್ಥ :** ಕಾಮಾಕ್ಷಿ, ವರಲಕ್ಷ್ಮಿ, ಕಮಲಾಕ್ಷಿ–ಕಮಲದಂತೆ ಕಣ್ಣುಳ್ಳವಳು ; ಜಯಲಕ್ಷ್ಮಿ, ಕಾಮ ಜನಕ–ಶ್ರೀ ವಿಷ್ಣುವಿನ ; ಪೂರ್ಣಫಲೇ ಸಫಲೆ–ಸಫಲಳಾದ ಪೂರ್ಣಫಲ ಸ್ವರೂಪಿಣಿಯಾದವಳು ; ಕಾಮಿತಾರ್ಥದಾಯಿನಿ–ಬಯಸಿದ ಇಷ್ಟಗಳನ್ನು ಪೂರೈಸುವವಳು ; ಶ್ರೀಫಲೇ, ಕಾಮಕಲೇ, ವಿಮಲೇ, ಕರಕಮಲೇ–ಕೈಗಳಲ್ಲಿ ತಾವರೆ ಹಿಡಿದವಳು ; ಕಾಮಕೋಟಿ, ಬಿಲಹರಿನುತ–ಬಿಲಹರಿ ರಾಗದಿಂದ ಸ್ತುತಿಸಲ್ಪಟ್ಟವಳೂ, ಕಮಲೇ ; ದಿನಕರ ಕೋಟಿ–ಕೋಟಿ ಸೂರ್ಯರ ; ಪ್ರಕಾಶ ಕಾಯೇ–ತೇಜಸ್ಸಿನಿಂದ ಕೂಡಿದ ದೇಹವುಳ್ಳವಳು ; ದೇದೀಪ್ಯಮಾನ ದಿವ್ಯಚ್ಛಾಯೇ–ಪ್ರಕಾಶಮಾನವಾದ ದಿವ್ಯ ಕಾಂತಿಯುಳ್ಳವಳು ; ವನಜಾಸನಾದಿ–ಬ್ರಹ್ಮನೇ ಮೊದಲಾದವರಿಂದ ; ವಂದಿತಳಾದವಳು ; ಮಾಯೇ, ವಾಸುದೇವ ಪರಬ್ರಹ ಜಾಯೆ–ಪರಬ್ರಹ್ಮನಾದ ವಾಸುದೇವನ ಪತ್ನಿ ; ಮನನ, ಧ್ಯಾನ, ಧ್ಯಾತೃ, ಧ್ಯೇಯೆ–ಧ್ಯಾನವೂ, ಧ್ಯಾನಿಸುವವಳೂ, ಧ್ಯಾನ ವಸ್ತುವೂ ಎಲ್ಲವೂ ತಾನೇ ಆಗಿರುವವಳು ; ಮಹನೀಯ–ಶ್ರೇಷ್ಠವಾದ ; ಸಾಮ್ರಾಜ್ಯ ಪ್ರದಾಯೆ–ವೈಭವಗಳನ್ನು ಕೊಡುವವಳು ; ಸನಕ ಸನಂದನಾದಿಭಿಃ–ಸನಕ, ಸನಂದನ ಮೊದಲಾದವರಿಂದ ; ಜ್ಞೇಯೆ–ತಿಳಿಯಲ್ಪಡುವವಳು ; ಸದಯೇ–ದಯಾಪೂರ್ಣಳಾದವಳು ; ಸರಸ ಗುರುಗುಹ ಸಹಾಯೇ–ಗುರುಗುಹ ಸಹಾಯಳಾದವಳು.

* * *

೨೦

ರಾಗ : ಬಿಲಹರಿ ತಾಳ : ಛಾಪು ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀ ಬಾಲಸುಬ್ರಹ್ಮಣ್ಯಾಗಚ್ಛಾಗ್ರಗಣ್ಯ ಶ್ರೀ ಚಿದಾನಂದನಾಥವರೇಣ್ಯ (ಶ್ರೀ ಬಾಲ)

ಅನುಪಲ್ಲವಿ : ಆಬಾಲ ಗೋಪವಿದಿತ ದೀನಶರಣ್ಯ ಆತ್ಮಪ್ರಕಾಶ ಲಾವಣ್ಯ ಕಾರುಣ್ಯ (ಶ್ರೀ ಬಾಲ)

ಚರಣ : ಸನಕಾದಿ ಸನ್ನುತ ಸ್ವಾಮಿನಾಥ ಸ್ವಾಮಿಶೈಲಸ್ಥಿತ ಸೋಮತಾತ
ಕನಕವಲ್ಲೀ ದೇವಸೇನೋಪೇತ ಕೈವಲ್ಯದಾತ ಸಕೃದ್ವಿಭಾತ
ವನಜವದನ ಪದಪಂಕೇರುಹ ವರದಾಶ್ರಿತ ಕಲ್ಪ ಮಹೀರುಹ
ಮನಸಿಜ ಸನಕಾದಿ ಸೇವಿತ ಕುಮಾರ ಧೀರತರ ಹರ ಗುರುಗುಹ (ಶ್ರೀ ಬಾಲ)

**ಪ್ರತಿಪದಾರ್ಥ :** ಅಗ್ರಗಣ್ಯ–ಮೊದಲಿಗನೆ; ಶ್ರೀ ಚಿದಾನಂದನಾಥವರೇಣ್ಯ–ಅಮೂಲ್ಯವಾದ ಜ್ಞಾನಾನಂದವನ್ನು ನೀಡುವವರಲ್ಲಿ ಮಾನ್ಯನೆ; ಆತ್ಮಪ್ರಕಾಶ–ಆತ್ಮಪ್ರಭೆಯಿಂದ; ಲಾವಣ್ಯ ಕಾರುಣ್ಯ–ಕರುಣೆಯೇ ಸೌಂದರ್ಯವಾಗಿ ಉಳ್ಳವನೆ; ಶ್ರೀ ಬಾಲಸುಬ್ರಹ್ಮಣ್ಯನೆ; ಆಗಚ್ಛ–ದಯಮಾಡಿ ಬಾ. ಸನಕಾದಿ–ಸನಕ ಮಹರ್ಷಿಯೇ ಮೊದಲಾದವರಿಂದ; ಸನ್ನುತ–ಸ್ತುತನಾದ; ಸ್ವಾಮಿನಾಥ; ಸ್ವಾಮಿ ಶೈಲ–ಸ್ವಾಮಿ ಮಲೆ*ಯಲ್ಲಿ; ಸ್ಥಿತ–ನೆಲಸಿದವನೆ; ಸೋಮತಾತ–ಈಶ್ವರನಿಗೆ ಪ್ರಿಯನಾದವನು.

ಕನಕವಲ್ಲಿ ಮತ್ತು ದೇವಸೇನೆಯರಿಂದ ಉಪೇತ–ಕೂಡಿದವನೆ; ಕೈವಲ್ಯದಾತ–ಮೋಕ್ಷವನ್ನು ಕರುಣಿಸುವವನೆ; ಸಕೃದ್ವಿಭಾತ–ಶೋಭಿಸುತ್ತಿರುವವನು; ವನಜ ವದನ ಪದ ಪಂಕೇರುಹ–ತಾವರೆಯಂತಹ ಮುಖ, ತಾವರೆಯಂತಹ (ಪಂಕೇರುಹ–ಕೆಸರಿನಲ್ಲಿ ಹುಟ್ಟಿದ್ದು–ಕಮಲ) ಪಾದಗಳುಳ್ಳವನೆ; ವರದ–ವರಗಳನ್ನು ನೀಡುವವನೆ; ಆಶ್ರಿತಕಲ್ಪಮಹೀರುಹ–ಆಶ್ರಯಕ್ಕೆ ಬಂದವರಿಗೆ ಕಲ್ಪವೃಕ್ಷದ ಹಾಗೆ ಕೇಳಿದುದನ್ನೆಲ್ಲ ನೀಡುವವನೆ; ಮನಸಿಜ–ಮನ್ಮಥ; ಸನಕ ಮುಂತಾದವರಿಂದ ಸೇವಿಸಲ್ಪಟ್ಟವನೆ; ಕುಮಾರ; ಧೀರತರ–ಅಪ್ರತಿಮ ಶೌರ್ಯವುಳ್ಳವನೆ; ಹರ ಗುರುಗುಹ–ಷಣ್ಮುಖಸ್ವಾಮಿಯೆ; ಆಗಚ್ಛ–ದಯಮಾಡಿ ಬಾ.

* * *

* ತಮಿಳುನಾಡಿನ ಕುಂಭಕೋಣಂ ಬಳಿ ಇರುವ ಪ್ರಸಿದ್ಧ ಕ್ಷೇತ್ರ.

೨೨

ರಾಗ : ಪೂರ್ವಿಕಲ್ಯಾಣಿ    ತಾಳ : ಆದಿ    ತ್ಯಾಗರಾಜರು

ಪಲ್ಲವಿ : ಪರಲೋಕ ಸಾಧನಮೇ ಮನಸಾ

ಅನುಪಲ್ಲವಿ : ಸ್ಮರ ಲೋಭ ಮೋಹಾದಿ ಪಾಪುಲನು
ಸ್ಮರಿಯಿಂಚಕೇ ಶ್ರೀರಾಮ ಭಜನ

ಚರಣ : ಜನನಾದಿ ರೋಗಭಯಾದುಲಚೇ
ಜಗಮಂದು ಗಲ್ಗು ದುರಾಸಲಚೇ
ತನಯಾದಿ ಬಾಂಧವುಲ ಭ್ರಮಚೇ
ದಗಲ ನೀದು ತ್ಯಾಗರಾಜ ನುತುನಿ ಭಜನ

**ಪ್ರತಿಪದಾರ್ಥ :** ಮನಸಾ–ಓಲೆ ಮನಸ್ಸೇ; ಸ್ಮರ ಲೋಭ ಮೋಹಾದಿ ಪಾಪುಲನು–ಕಾಮ ಲೋಭ ಮೋಹ ಮುಂತಾದ ಪಾಪವಿಚಾರಗಳನ್ನು ; ಸ್ಮರಿಯಿಂಚಕೇ–ಮನಸ್ಸಿಗೆ ತಂದುಕೊಳ್ಳದೆ; ಶ್ರೀರಾಮ ಭಜನ–ಶ್ರೀರಾಮಚಂದ್ರನನ್ನು ಭಜಿಸುವುದೇ; ಪರಲೋಕ ಸಾಧನಮು–ಪರಲೋಕವನ್ನು (ಮುಕ್ತಿಯನ್ನು ಎಂದು ಭಾವ) ಗಳಿಸಲು ಸಾಧನ. ಜನನಾದಿ ರೋಗ ಭಯಾದುಲಚೇ–ಹುಟ್ಟು, ರೋಗ ಮೊದಲಾದ ಭಯಗಳಿಂದ; ಜಗಮಂದು ಗಲ್ಗು ದುರಾಸಲಚೇ–ಪ್ರಪಂಚದಷ್ಟು ದೊಡ್ಡ ದುರಾಸೆಯಿಂದ; ತನಯಾದಿ ಬಾಂಧವುಲ–ಮಗ ಮುಂತಾದ ಬಂಧು ಬಾಂಧವರ; ಭ್ರಮಚೇ–ಭ್ರಮೆಯಿಂದ; ನೀದು ತಗಲ–ನೀನು ಆವೃತನಾಗಿರಲು; ತ್ಯಾಗರಾಜ ನುತುನಿ ಭಜನ–ತ್ಯಾಗರಾಜನಿಂದ ನುತನಾದ ಶ್ರೀರಾಮ ಭಜನೆಯು (ಮಾತ್ರವೆ) ; ಪರಲೋಕ ಸಾಧನವಾಗಿದೆ.

* * *

೨೩

ರಾಗ : ಪೂರ್ವಿಕಲ್ಯಾಣಿ ತಾಳ : ಆದಿ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಮೀನಾಕ್ಷಿ ಮೇ ಮುದಂ ದೇಹಿ ಮೇಚಕಾಂಗಿ ರಾಜಮಾತಂಗಿ (ಮೀನಾಕ್ಷಿ)

ಅನುಪಲ್ಲವಿ : ಮಾನ ಮಾತೃಮೇಯೇ ಮಾಯೆ–ಮರಕತಚ್ಛಾಯೆ ಶಿವಜಾಯೆ
ಮೀನಲೋಚನಿ ಪಾಶಮೋಚನಿ ಮಾನಿನೀ ಕದಂಬ ವನವಾಸಿನಿ (ಮೀನಾಕ್ಷಿ)

ಚರಣ : ಮಧುರಾಪುರಿ ನಿಲಯೆ ಮಣಿವಲಯೆ ಮಲಯಧ್ವಜ ಪಾಂಡ್ಯರಾಜ ತನಯೆ
ವಿಧು ವಿಡಂಬನ ವದನೆ ವಿಜಯೆ ವೀಣಾಗಾನ ದಶಗಮಕಕ್ರಿಯೆ
ಮಧುಮದಮೋದಿತ ಹೃದಯೇ ಸದಯೇ ಮಹಾದೇವ ಸುಂದರೇಶ ಪ್ರಿಯೇ
ಮಧುಮುರರಿಪು ಸೋದರಿ ಶಾತೋದರಿ ವಿಧಿ ಗುರುಗುಹ ವಶಂಕರಿ ಶಂಕರಿ (ಮೀನಾಕ್ಷಿ)

**ಪ್ರತಿಪದಾರ್ಥ :** ಮೇಚಕಾಂಗಿ–ಕಪ್ಪುಬಣ್ಣದ ದೇಹವುಳ್ಳ ; ರಾಜಮಾತಂಗಿ ಮೀನಾಕ್ಷಿ, ಮೇ–ನನಗೆ ಮುದಂ ದೇಹಿ–ಸಂತೋಷವನ್ನು ಉಂಟುಮಾಡು ; ಮಾನ ಮಾತೃ ಮೇಯೇ–ಸಮಸ್ತವನ್ನು ಅಳೆದವಳು, ಅಳೆಯಲು ಅಳತೆಗೋಲಾದವಳು, ಎಲ್ಲಕ್ಕೂ ಮಾತೃವಾದವಳು ನೀನು ; ಮಾಯೆ, ಮರಕತಚ್ಛಾಯೆ–ಪಚ್ಚೆಯಂತೆ ಕಾಂತಿಯುಳ್ಳವಳು ; ಶಿವಜಾಯೆ–ಈಶ್ವರನ ಪತ್ನಿ ; ಮೀನಲೋಚನಿ–ಮೀನಿನಂತೆ ಸುಂದರವಾದ ಕಣ್ಣುಗಳುಳ್ಳವಳು ; ಪಾಶ ಮೋಚನಿ–ದುಃಖದ ಬಂಧನಗಳಿಂದ ಬಿಡುಗಡೆ ಮಾಡುವವಳು ; ಕದಂಬವನದಲ್ಲಿ ವಾಸಿಸುವವಳು ; ಮಧುರಾಪುರದಲ್ಲಿ ನೆಲಸಿರುವವಳು, ಮಣಿ–ರತ್ನವಲಯಗಳನ್ನು ಧರಿಸಿರುವವಳು ; ಮಲಯಧ್ವಜ ಪಾಂಡ್ಯರಾಜನ ಮಗಳಾಗಿ ಹುಟ್ಟಿದವಳು ; ವಿಧು–ಚಂದ್ರನನ್ನು ; ವಿಡಂಬನ–ಮೂದಲಿಸುವ ; ವದನೆ–ಮುಖವುಳ್ಳವಳು ; ವಿಜಯೆಯಾದವಳು, ವೀಣಾಗಾನ ದಶಗಮಕ ಕ್ರಿಯೆಗಳಲ್ಲಿ ಆಸಕ್ತಳಾದವಳು ; ಮಧುಮದಮೋದಿತ ಹೃದಯೆ–ಮಧುಪಾನದಿಂದ ಸಂತಸಗೊಂಡ ಹೃದಯವುಳ್ಳವಳು ; ಸದಯೆ–ದಯಾಪೂರ್ಣಳಾದವಳು ; ಮಹಾದೇವ ಸುಂದರೇಶ್ವರನಿಗೆ ಪ್ರಿಯಳಾದವಳು ; ಮಧು ಮತ್ತು ಮುರರೆಂಬ ರಾಕ್ಷಸರಿಗೆ ರಿಪು–ಶತ್ರುವಾದ ವಿಷ್ಣುವಿನ ಸೋದರಿಯಾದವಳು ; ಶಾತೋದರಿ–ಕೆಂಪಗಿರುವ ಉದರಭಾಗವುಳ್ಳವಳು ; ವಿಧಿ–ಬ್ರಹ್ಮ ; ಶಂಕರಿ–ಒಳಿತನ್ನು ಮಾಡುವವಳು.

**ಟಿಪ್ಪಣಿ :** ಪೂರ್ವಿಕಲ್ಯಾಣಿ ರಾಗಕ್ಕೆ ಮುದ್ದುಸ್ವಾಮಿ ದೀಕ್ಷಿತರ ಸಂಪ್ರದಾಯದಲ್ಲಿ ‘ ಗಮಕಕ್ರಿಯಾ ’ ಎಂಬ ಹೆಸರುಂಟು. ಈ ಕೃತಿಯಲ್ಲಿ ಹತ್ತು ವಿಧದ ಗಮಕ ಕ್ರಿಯೆಗಳನ್ನೂ, ಗಮಕಕ್ರಿಯಾ ಎಂಬ ರಾಗ ಮುದ್ರೆಯನ್ನೂ ದೀಕ್ಷಿತರು ಸೂಚಿಸಿದ್ದಾರೆ.

* * *

೨೪

ರಾಗ : ಪೂರ್ವಿಕಲ್ಯಾಣಿ     ತಾಳ : ರೂಪಕ

: ಮೈಸೂರು ಸದಾಶಿವರಾಯರು

ಪಲ್ಲವಿ : ಗಂಗಾಧರ ತ್ರಿಪುರಹರ ಶ್ರೀ ಸಾರಂಗಧರ (ಗಂಗಾಧರ)

ಅನುಪಲ್ಲವಿ : ಶೃಂಗಾರಶೇಖರ ಶಿವಶಂಕರ ಜಟಾಧರ
ಭೃಂಗಿ ನಟನ ವಿನೋದ ಬೃಂದಾರಕವಂದಿತ ಪಾದ (ಗಂಗಾಧರ)

ಚರಣ : 1 ಅಹಿಭೂಷಣ ಅಮರಾವನ ಅಜಸನ್ನುತ ಬದರೀವನ
ತುಹಿನಾದ್ರಿತನಯಾ ಪ್ರಿಯ ದುಃಖದೂರ ಕಾಲ ಕಾಲ (ಗಂಗಾಧರ)

2 ಭಾವಜಹರ ಕರುಣಾಕರ ಭಸ್ಮಧೂಳಿತ ಚರ್ಮಾಂಬರ
ಪಾವನ ಪದಯುಗಳ ಪಾಹಿ ಪಾಹಿ ಗೌರೀವರ (ಗಂಗಾಧರ)

3 ಸದಾಶಿವ ವಿನುತಾನಂದ ಸಂಭ್ರಮಚಿತ್ತಾಸುರ
ಮದಹರಣ ಮುನಿಪೋಷಣ ಮಹಾದೇವ ಶಂಭೋ ಹರ (ಗಂಗಾಧರ)

**ಪ್ರತಿಪದಾರ್ಥ :** ಗಂಗಾಧರ, ತ್ರಿಪುರಹರ–ತ್ರಿಪುರರನ್ನು ನಾಶ ಮಾಡಿದವನು ; ಸಾರಂಗಧರ–ಗಂಡುಜಿಂಕೆಯನ್ನು ಹಿಡಿದಿರುವವನು ; ಶೃಂಗಾರಶೇಖರ, ಶಿವಶಂಕರ, ಜಟಾಧರ ; ಭೃಂಗಿ–ನಾಟ್ಯದಲ್ಲಿ ಪ್ರವೀಣನಾದ ಶಿವಗಣ ; ನಟನ–ಅವನ (ಭೃಂಗಿಯ) ನಟನವನ್ನು ನೋಡಿ ವಿನೋದಿಸುವವನು ; ಬೃಂದಾರಕ–ದೇವತೆಗಳಿಂದ, ವಂದಿಸಲ್ಪಟ್ಟ ಪಾದಗಳುಳ್ಳವನು. ಅಹಿಭೂಷಣ–ಸರ್ಪವನ್ನು ಅಲಂಕಾರವಾಗಿ ಉಳ್ಳವನು ; ಅಮರಾವನ–ದೇವತೆಗಳನ್ನು ಪಾಲಿಸುವವನು ; ಅಜಸನ್ನುತ–ಬ್ರಹ್ಮನಿಂದ ಸ್ತುತನಾದವನು ; ಬದರೀವನ–ಬದರೀವನದಲ್ಲಿ ನೆಲಸಿರುವವನು ; ತುಹಿನಾದ್ರಿತನಯಾ ಪ್ರಿಯ–ಪರ್ವತರಾಜನ ಮಗಳು ಪಾರ್ವತಿಯ ಪ್ರಿಯನು ; ದುಃಖವನ್ನು ದೂರ ಮಾಡುವವನು ; ಯಮನಿಗೆ ಯಮನಾದವನು ; ಭಾವಜ–ಮನ್ಮಥನನ್ನು ; ಹರ–ನಾಶ ಮಾಡಿದವನು ; ಕರುಣಾಕರ ; ಭಸ್ಮಧೂಳಿತ–ವಿಭೂತಿ ಲೇಪಿಸಿಕೊಂಡವನು ; ಚರ್ಮಾಂಬರ–ಚರ್ಮವನ್ನು ಧರಿಸಿದವನು ; ಪವಿತ್ರವಾದ ಪಾದಗಳುಳ್ಳವನು ; ಗೌರೀವರ–ಗೌರೀಪತಿ ; ಪಾಹಿ ಪಾಹಿ–ರಕ್ಷಿಸು ರಕ್ಷಿಸು ; ಸದಾಶಿವ ವಿನುತ– ಸಾದಾಶಿವನಿಂದ ಸ್ತುತನಾದವನು ; ಆನಂದಸಂಭ್ರಮಚಿತ್ತನಾದವನು ; ಅಸುರ ಮದಹರಣ–ರಾಕ್ಷಸರ ಮದವನ್ನು ನಾಶ ಮಾಡುವವನು ; ಮುನಿಗಳನ್ನು ಪೋಷಿಸುವವನು ; ಮಹಾದೇವ, ಶಂಭು, ಹರನೇ, ಪಾಹಿ ಪಾಹಿ–ಕಾಪಾಡು ಕಾಪಾಡು.

* * *

೨೫

ರಾಗ : ಕಲ್ಯಾಣಿ ತಾಳ : ರೂಪಕ ಶ್ಯಾಮಾಶಾಸ್ತ್ರಿಗಳು

ಪಲ್ಲವಿ : ಹಿಮಾದ್ರಿಸುತೇ ಪಾಹಿಮಾಂ ವರದೇ ಪರದೇವತೆ

ಅನುಪಲ್ಲವಿ : ಸುಮೇರುಮಧ್ಯವಾಸಿನಿ ಶ್ರೀ ಕಾಮಾಕ್ಷಿ

ಚರಣ : ಶ್ಯಾಮಕೃಷ್ಣ ಸೋದರಿ ಗೌರಿ ಪರಮೇಶ್ವರಿ ಗಿರಿಜಾ
ನೀಲವೇಣಿ ಕೀರವಾಣಿ ಶ್ರೀ ಲಲಿತೇ (ಹಿಮಾದ್ರಿ)

**ಪ್ರತಿಪದಾರ್ಥ :** ವರದೇ–ವರಗಳನ್ನು ನೀಡುವವಳೆ ; ವರದೇವತೆ–ಅತ್ಯಂತ ಶ್ರೇಷ್ಠಳಾದ ದೇವಿಯೇ ; ಹಿಮಾದ್ರಿ ಸುತೆ–ಹಿಮವತ್ ಪರ್ವತರಾಜನ ಪುತ್ರಿಯಾದ ಪಾರ್ವತಿಯೆ ; ಮಾಂ ಪಾಹಿ–ನನ್ನನ್ನು ಕಾಪಾಡು ; ಶ್ಯಾಮಕೃಷ್ಣ ಸೋದರಿ–ಶ್ರೀಕೃಷ್ಣನ ಸಹೋದರಿ (ಶ್ಯಾಮಕೃಷ್ಣ ಎಂಬುದು ಶ್ಯಾಮಾಶಾಸ್ತ್ರಿಗಳ ಅಂಕಿತ) ; ಸುಮೇರುಮಧ್ಯವಾಸಿನಿ–ಮೇರು ಪರ್ವತದ ಮಧ್ಯೆ ವಾಸಮಾಡುತ್ತಿರುವವಳು ; ಶ್ರೀ ಕಾಮಾಕ್ಷಿ; ಗೌರಿ ; ಪರಮೇಶ್ವರಿ ; ಗಿರಿಜಾ ; ನೀಲವೇಣಿ–ನೀಲವಾದ ಕೂದಲುಳ್ಳವಳು ; ಕೀರವಾಣಿ–ಗಿಣಿಯಹಾಗೆ ಮಧುರವಾದ ದನಿಯುಳ್ಳವಳು ; ಶ್ರೀಲಲಿತೆ ; ಮಾಂ ಪಾಹಿ–ನನ್ನನು ಕಾಪಾಡು.

* * *

೨೬

ರಾಗ : ಕಲ್ಯಾಣಿ ತಾಳ : ಛಾಪು ತ್ಯಾಗರಾಜರು

ಪಲ್ಲವಿ : ನಿಧಿ ಚಾಲ ಸುಖಮಾ ರಾಮುನಿ ಸ
ನ್ನಿಧಿ ಸೇವ ಸುಖಮಾ ನಿಜಮುಗ ಬಲ್ಕು ಮನಸಾ (ನಿಧಿ)

ಅನುಪಲ್ಲವಿ : ದಧಿ ನವನೀತ ಕ್ಷೀರಮುಲು ರುಚೋ ದಾಶ
ರಥಿ ಧ್ಯಾನ ಭಜನ ಸುಧಾರಸಮು ರುಚೋ (ನಿಧಿ)

ಚರಣ : ದಮ ಶಮಮುನು ಗಂಗಾಸ್ನಾನಮು ಸುಖಮಾ ಕ
ರ್ದಮ ದುರ್ವಿಷಯ ಕೂಪ ಸ್ನಾನಮು ಸುಖಮಾ
ಮಮತಬಂಧನಯುತ ನರಸ್ತುತಿ ಸುಖಮಾ
ಸುಮತಿ ತ್ಯಾಗರಾಜ ನುತುನಿ ಕೀರ್ತನ ಸುಖಮಾ (ನಿಧಿ)

**ಪ್ರತಿಪದಾರ್ಥ :** ನಿಧಿ–ಸುಖ ಸಂಪತ್ತು ; ಚಾಲ–ತುಂಬಾ ; ಸುಖಮಾ–ಸುಖವೋ ; ಅಥವಾ ರಾಮುನಿ–ಶ್ರೀರಾಮನ ; ಸನ್ನಿಧಿ ಸೇವ–ಸಾನ್ನಿಧ್ಯದಲ್ಲಿದ್ದು ಸೇವೆ ಮಾಡುವುದು ; ಸುಖಮಾ–ಹೆಚ್ಚು ಸುಖವೋ ; ಮನಸಾ–ಎಲೈಮನಸ್ಸೆ ; ನಿಜಮುಗ ಬಲ್ಕು–ನಿಜವಾಗಿ ಹೇಳು. ದಧಿ–ಮೊಸರು ; ನವನೀತ–ಬೆಣ್ಣೆ ; ಕ್ಷೀರಮುಲು–ಹಾಲು ಮುಂತಾದವು ; ರುಚೋ–ರುಚಿಕರವಾಗಿರುತ್ತವೆಯೋ, ದಾಶರಥಿಯ ಧ್ಯಾನ ಭಜನ ಸುಧಾರಸ–ಅಮೃತ ರಸವು ರುಚಿಯಾಗಿರುತ್ತದೆಯೊ ? ದಮಶಮಮುನು–ಇಂದ್ರಿಯಗಳನ್ನು ದಮಿಸಿ ಅಂಕೆಯಲ್ಲಿಟ್ಟು, ಶಮನಗೊಳಿಸುವುದು; ಗಂಗಾಸ್ನಾನಮು–ಗಂಗಾಸ್ನಾನ ಮಾಡುವುದು ಸುಖವೋ, ದುರ್ವಿಷಯ–ನೀಚವಾದ ಕಾಮನೆಗಳೆಂಬ ; ಕರ್ದಮ–ಕೆಸರಿನ ; ಕೂಪ–ಬಾವಿಯ, ಸ್ನಾನವು ಸುಖವೋ ? ಮಮತೆಯ ಬಂಧನದಿಂದ ಕೂಡಿದ ನರಸ್ತುತಿಯು ಸುಖಕರವೋ ಅಥವಾ ಸುಮತಿ–ಒಳ್ಳೆಯ ಮತಿಯಿಂದ ಕೂಡಿದ, ತ್ಯಾಗರಾಜ ನುತುನಿ–ತ್ಯಾಗರಾಜನಿಂದ ಸ್ತುತನಾದ ಶ್ರೀರಾಮನ ; ಕೀರ್ತನವು ಸುಖವೋ, ಹೇಳು ಮನಸ್ಸೇ ಹೇಳು.

**ತಾತ್ಪರ್ಯ :** ಯಾವುದು ಸುಖ ? ನಿಧಿ ಸುಖವೇ, ಶ್ರೀರಾಮನ ಸನ್ನಿಧಿ ಸುಖವೆ ? ತ್ಯಾಗರಾಜರು ಮನಸ್ಸಿಗೆ ಸವಾಲು ಹಾಕುತ್ತಾರೆ. ಆಲೋಚನೆ ಮಾಡಿ ನಿಜವಾಗಿ ಹೇಳು ಎನ್ನುತ್ತಾರೆ. ಹಾಲು, ಮೊಸರು, ಬೆಣ್ಣೆ ಇವೆಲ್ಲ ರುಚಿ. ಆದರೆ ಇವುಗಳಿಗಿಂತ ರುಚಿಯಾದದ್ದು ದಾಶರಥಿಯ ಭಜನಾಮೃತರಸವಲ್ಲವೆ ? ನೀಚವಾದ ಕಾಮನೆಗಳೆಂಬ ಕೆಸರಿನಲ್ಲಿ ಮುಳುಗುವುದು ಸುಖವೋ ? ಇಂದ್ರಿಯ ದಮನವೆಂಬ ಗಂಗಾಸ್ನಾನ ಮಾಡುವುದು ಸುಖವೊ ? ಮೋಹಬಂಧನದಿಂದ ಕೂಡಿದ ನರಸ್ತುತಿ ಸುಖವೋ ಇಲ್ಲವೆ, ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರನ ನುತಿ ಸುಖವೋ ? ಹೇಳು ಮನಸ್ಸೇ ಹೇಳು.

* * *

೨೭

ರಾಗ : ಕಲ್ಯಾಣಿ ತಾಳ : ಆದಿ

ಸುಬ್ಬರಾಯಶಾಸ್ತ್ರಿ

ಪಲ್ಲವಿ :

ನಿನುವಿನಾ ಗತಿಗಾನ ಜಗಾನ ವನರುಹಾಕ್ಷಿ
ಧರ್ಮ ಸಂವರ್ಧನಿ ಕಾಮ ಸಂಮರ್ದನಿ (ನಿನು)

ಅನುಪಲ್ಲವಿ :

ವಿನುತ ಪಾಲಿನಿವಿ ನೀವನುಚುನೇ
ವಿನಿ ಸದಾ ನಿನ್ನೆ ಶರಣಂಟಿನಿ
ಮನವಿನಿ ವಿನುಮನಿ ನಿನು ವೇಡ್ಕೊಂಟಿನಿ
ವನರುಹ ಭವ ದನುಜರಿಪು ವಿನುತ ಪದ (ನಿನು)

ಚರಣ : 1 ಪದಪಂಕಜಮುಲ ನಮ್ಮಿತಿಯಾಪದಲೆಲ್ಲನು ದೀರ್ತುವನಿ ನಾ
ಮದಿಲೋನ ದಲಚಿ ನಿನ್ನು ಗೊಲಿಚಿತಿ ಮರಾಳಗಮನ ರಾವೇ ಪುರಾರಿಸತಿ (ನಿನು)

2 ಶರಣಾಗತಜನ ಪೋಷಣ ತರುಣಾಂಬುಜ ನಿಜ ಚರಣ
ಪರಿತಾಪಮುನು ದೀರ್ಚಿ ಬ್ರೋವುಮು ಪರಾಕು ಸಲುಪರಾದು ಪುರಾರಿಸತಿ (ನಿನು)

3 ಇಲಲೋಪಲ ಕರುಣಾನಿಧಿ ನೀವಲೆನೇ ಗಲದಾ ವಲದಾ ನತ
ಕಲುಷಾನಲ ಜಲದಾ ಸಂತತ ವಿನುತ ಕುಮಾರುನಿಕಭಿಮಾನಿನಿ ನೀವೇಗದಾ (ನಿನು)

**ಪ್ರತಿಪದಾರ್ಥ :** ವನರುಹಾಕ್ಷಿ–ತಾವರೆಯಂತೆ ಕಣ್ಣುಳ್ಳವಳೆ; ಧರ್ಮ ಸಂವರ್ಧನಿ–ಧರ್ಮವನ್ನು ವರ್ಧಿಸುವವಳೆ; ಕಾಮ ಸಂಮರ್ದಿನಿ–ಕಾಮವನ್ನು ಹೋಗಲಾಡಿಸುವವಳು ದೇವಿ, ನಿನ್ನುವಿನಾ–ನೀನಲ್ಲದೆ; ಜಗಾನ–ಈ ಲೋಕದಲ್ಲಿ; ಗತಿಗಾನ–ಬೇರೆ ಯಾರು ಗತಿ ? ವಿನುತ ಪಾಲಿನಿ–ನುತಿಸುವವರನ್ನು ಪಾಲಿಸುವವಳು; ನೀವನುಚುನೇ–ನೀನು ಎಂದು; ವಿನಿ–ಕೇಳಿ; ಸದಾ–ಯಾವಾಗಲೂ; ನಿನ್ನೆ ಶರಣಂಟಿನಿ–ನಿನ್ನನ್ನೇ ಶರಣುಹೋಗಿದ್ದೇನೆ; ಮನವಿನಿ ವಿನುಮು ಅನಿ–ನನ್ನ ಬಿನ್ನಹವನ್ನು ಕೇಳು ಎಂಬುದಾಗಿ; ನಿನು–ನಿನ್ನನ್ನು; ವೇಡ್ಕೊಂಟಿನಿ–ಬೇಡಿಕೊಳ್ಳುತ್ತಿದ್ದೇನೆ; ವನರುಹಭವ–ಬ್ರಹ್ಮ; ದನುಜರಿಪು–ವಿಷ್ಣು (ಮೊದಲಾದವರಿಂದ); ವಿನುತ ಪದ–ಸ್ತುತಿಗೊಂಡ ಪಾದಗಳುಳ್ಳವಳೆ; ಮರಾಳಗಮನ–ಹಂಸದಂತೆ ನಡಿಗೆಯುಳ್ಳವಳೆ; ಪುರಾರಿಸತಿ–ಶಿವಪತ್ನಿಯೆ; ರಾವೇ–ಬಾರಮ್ಮ; ಪದಪಂಕಜಮುಲ ನಮ್ಮಿತಿ–ನಿನ್ನ ಪಾದಕಮಲಗಳನ್ನು ನಂಬಿದ್ದೇನೆ; ಆಪದಲೆಲ್ಲನು–ಸಕಲ ಆಪತ್ತುಗಳನ್ನು; ದೀ(ತೀ)ರ್ತುವನಿ–ತೀರಿಸುವೆಯೆಂದು; ನಾ ಮದಿಲೋನ–ನನ್ನ ಮನಸ್ಸಿನಲ್ಲಿ; ದಲಚಿ–ತಿಳಿದು; ನಿನ್ನುಗೊಲಿಚಿತಿ–ನಿನ್ನನ್ನು ಸೇವಿಸುತ್ತಿದ್ದೇನೆ; ಶರಣಾಗತ ಜನ ಪೋಷಣ–ಶರಣು ಬಂದ ಜನರನ್ನು ಪೋಷಿಸುವ ಕರುಣಾಂಬುಜ ನಿಜ ಚರಣ–ಎಳೆಯ ತಾವರೆಯಂತೆ ಪಾದಗಳುಳ್ಳ; ಪುರಾರಿಸತಿ–ಪರಮೇಶ್ವರನ ಪತ್ನಿಯೆ; ಪರಿತಾಪಮು ದೀರ್ಚಿ–ನನ್ನ ಸಂಕಟವನ್ನು ಪರಿಹರಿಸಿ; ಬ್ರೋವುಮು–ಕಾಪಾಡು; ಪರಾಕು ಸಲುಪರಾದು–ಅಲಕ್ಷಿಸಬೇಡ; ಇಲಲೋಪಲ–ಈ ಜಗತ್ತಿನಲ್ಲಿ; ಕರುಣಾನಿಧಿ–ಕರುಣೆಯ ನಿಧಿ; ನೀವಲನೇ ಗಲದಾ–ನೀನೇ ಎಂದು ಗೊತ್ತಿಲ್ಲವೆ ? ನತ ಕಲುಷಾನಲ ಜಲದಾ–ಭಕ್ತರ ದೋಷಗಳೆಂಬ ಬೆಂಕಿಗೆ ಮೋಡದಂತಿರುವವಳೆ; ಸಂತತ ವಿನುತ–ಯಾವಾಗಲೂ ಸ್ತುತನಾದ; ಕುಮಾರುನಿಕಿ–ಕುಮಾರ ಸ್ವಾಮಿಯನ್ನು ಕುರಿತು; ಅಭಿಮಾನಿನಿ ನೀವೇ ಗದಾ–ಅಭಿಮಾನ ತೋರಿಸುವವಳು ನೀನೇ ಅಲ್ಲವೆ ?

**ತಾತ್ಪರ್ಯ :** ಧರ್ಮವನ್ನು ವರ್ಧಿಸುವವಳೂ; ಕಾಮವನ್ನು ಹೋಗಲಾಡಿಸುವವಳೂ ಆದ ದೇವಿಯೆ, ನೀನಲ್ಲದೆ ಈ ಜಗತ್ತಿನಲ್ಲಿ ನನ್ನನ್ನು ಕಾಪಾಡುವವರು ಬೇರೆ ಯಾರಿದ್ದಾರೆ ? ಸ್ತುತಿಸುವವರನ್ನು ಕೈಬಿಡದೆ ಪರಿಪಾಲಿಸುವವಳು ನೀನೇ ಎಂಬುದಾಗಿ ಕೇಳಿ ತಿಳಿದು ನಿನ್ನನ್ನೇ ಶರಣು ಹೋಗಿದ್ದೇನೆ. ನನ್ನ ಬಿನ್ನಹವನ್ನು ಕೇಳು ಎಂದು ಬೇಡಿಕೊಳ್ಳುತ್ತಿದ್ದೇನೆ. ನನ್ನ ಆಪತ್ತುಗಳೆಲ್ಲವನ್ನೂ ಹೋಗಲಾಡಿಸುವೆಯೆಂದು ನಿನ್ನ ಪಾದಕಮಲಗಳನ್ನೇ ನಂಬಿಕೊಂಡಿದ್ದೇನೆ. ಶರಣಾಗತರನ್ನು ಕಾಪಾಡುವ, ಎಳೆದಾವರೆಯಂತಹ ಪಾದಗಳುಳ್ಳ ನೀನು ನನ್ನ ಪರಿತಾಪಗಳನ್ನು ಪರಿಹರಿಸು, ಕಾಪಾಡು, 'ಅಲಕ್ಷಿಸಬೇಡ. ನೀನು ಕರುಣೆಯ ಸಾಗರವಾಗಿದ್ದೀಯೆ. ಭಕ್ತರ ದೋಷಗಳೆಂಬ ಬೆಂಕಿಗೆ ನೀರು ಸುರಿಯುವ ಮೇಘವಾಗಿದ್ದೀಯೆ. ನನ್ನನ್ನು ಕೈಬಿಡಬೇಡ.

* * *

೨೮

ರಾಗ : ಸಿಂಹೇಂದ್ರಮಧ್ಯಮ   ತಾಳ : ಮಿಶ್ರಛಾಪು   ಮೈಸೂರು ವಾಸುದೇವಾಚಾರ್ಯರು

ಪಲ್ಲವಿ : ನಿನ್ನೇ ನಮ್ಮಿತಿನಯ್ಯ ಶ್ರೀರಾಮ (ನಿನ್ನೆ)

ಅನುಪಲ್ಲವಿ : ಪನ್ನಗೇಂದ್ರಶಯನ ಪನ್ನಗಾರಿ ವಾಹನ
ಪನ್ನಗಾಚಲ ಭವ್ಯಸದನ ಪ್ರಪನ್ನಾರ್ತಿಹರಣ ನಿಪುಣ (ನಿನ್ನೆ)

ಚರಣ : ಪರಮ ಕೃಪಾಸಾಗರ ಪರತತ್ವ ಆಧಾರ
ವರಮುಲೊಸಗಿ ಬ್ರೋವವಯ್ಯ ವಾಸುದೇವ
ನೀರಜನೇತ್ರ ನೀರದನಿಭ ಗಾತ್ರ
ಗಿರಿರಾಜ ಸುತಾವರ ಶಂಕರ ಸನ್ನುತಿಪಾತ್ರ ಸಚ್ಚರಿತ್ರ (ನಿನ್ನೆ)

**ಪ್ರತಿಪದಾರ್ಥ :** ಶ್ರೀರಾಮಚಂದ್ರ, ನಿನ್ನೆ ನಮ್ಮಿತಿನಯ್ಯ–ನಿನ್ನನ್ನೇ ನಂಬಿದ್ದೇನೆ; ಪನ್ನಗೇಂದ್ರಶಯನ–ಆದಿಶೇಷನ ಮೇಲೆ ಮಲಗಿರುವ; ಪನ್ನಗಾರಿ ವಾಹನ–ಗರುಡನನ್ನು ವಾಹನವಾಗಿ ಉಳ್ಳ; ಪನ್ನಗಾಚಲ ಭವ್ಯ ಸದನ–ಗರುಡಾಚಲ ಪರ್ವತದ ಮೇಲೆ ನೆಲಸಿರುವ; ಪ್ರಪನ್ನ–ಶರಣಾಗತರಾದವರ; ಅರ್ತಿಹರಣ–ಸಂಕಟಗಳನ್ನು ಹೋಗಲಾಡಿಸುವ; ಶ್ರೀರಾಮ, ನಿನ್ನನ್ನೇ ನಾನು ನಂಬಿದ್ದೇನೆ. ಪರಮ ಕೃಪಾಸಾಗರ, ಪರತತ್ವ ಆಧಾರ–ಸಮಸ್ತಕ್ಕೂ ಆಧಾರಭೂತವಾಗಿರುವ ಪರತತ್ವರೂಪಿಯೆ; ನೀರಜನೇತ್ರ–ತಾವರೆಯಂತೆ ಕಣ್ಣುಗಳುಳ್ಳವನೆ; ನೀರದ ನಿಭ–ಮೋಡವನ್ನು ಹೋಲುವ, (ಮೇಘದಂತೆ ಶ್ಯಾಮಲವಾಗಿರುವ); ಗಾತ್ರ–ದೇಹವುಳ್ಳವನೆ; ಗಿರಿರಾಜ ಸುತಾವರ ಶಂಕರ–ಪರ್ವತರಾಜನ ಮಗಳಾದ ಪಾರ್ವತಿಗೆ ಪತಿಯಾದ ಪರಮೇಶ್ವರನ; ಸನ್ನುತಿ ಪಾತ್ರ–ಸ್ತುತಿಗೆ ಪಾತ್ರನಾದವನೆ (ಶಂಕರನಿಂದ ಸ್ತುತನಾದವನೆ); ಸಚ್ಚರಿತ್ರ–ಶುಭ ಚಾರಿತ್ರ್ಯವುಳ್ಳವನೆ; ವಾಸುದೇವ, ವರಮುಲೊಸಗಿ–ವರವನ್ನು ಕರುಣಿಸಿ; ಬ್ರೋವವಯ್ಯ–ಕಾಪಾಡು ಸ್ವಾಮಿ.

* * *

೨೯

ರಾಗ : ಸಿಂಹೇಂದ್ರಮಧ್ಯಮ   ತಾಳ : ಮಿಶ್ರಛಾಪು   ತ್ಯಾಗರಾಜರು

ಪಲ್ಲವಿ : ನೀದು ಚರಣಮುಲೇ ಗತಿಯನಿ
ನೆರನಮ್ಮಿನವಾಡನುರಾ ಓ, ರಾಮ (ನೀದು)

ಅನುಪಲ್ಲವಿ : ವೇದವೇದಾಂತ ವಿದಿತುಡನಿ ವೆಲಯು ಸರ್ವೇಶ ರಾಮ (ನೀದು)

ಚರಣ : ಪಾಪ ಕರ್ಮಮು ಕುಂಟರಾ ಯಿಂದು ಬಾಧಪಡನೇ ಚಾಲರಾ
ಯೇಪಗಿದಿನ್ನೈನ ನನ್ನೇಲುಕೋ ತ್ಯಾಗರಾಜನುತ (ನೀದು)

**ಪ್ರತಿಪದಾರ್ಥ :** ಓ ರಾಮಚಂದ್ರ, ನೀದು–ನಿನ್ನ; ಚರಣಮುಲೇ–ಪಾದಗಳೇ; ಗತಿಯನಿ–ಗತಿಯೆಂದು; ನೆರನಮ್ಮಿನವಾಡನುರಾ–ಬಲವಾಗಿ ನಂಬಿದ್ದೇನಯ್ಯ. ವೇದವೇದಾಂತ ವಿದಿತುಡು–ವೇದ ವೇದಾಂತಗಳಿಗೆ ಅರಿವಾಗುವವನು ಎಂದು ವೆಲಯು–ಪ್ರಸಿದ್ಧನಾದ; ಶ್ರೀ ಸರ್ವೇಶ ರಾಮ, ನಿನ್ನ ಪಾದಗಳೇ ನನಗೆ ಗತಿಯೆಂದು ನಂಬಿದ್ದೇನೆ. ಪಾಪಕರ್ಮಮು ಕುಂಟರಾ–ನನ್ನ ಪಾಪ ಕರ್ಮಗಳನ್ನು ಹೋಗಲಾಡಿಸು; ಯಿಂದು–ಈಗ; ಬಾಧಪಡನೇ ಜಾ(ಚಾ)ಲರಾ–ಬಾಧೆ ಪಡುತ್ತಿರುವುದೇ ಸಾಕಾಗಿದೆಯಪ್ಪ; ಯೇಪಗಿದಿನ್ನೈನ–ಯಾವುದಾದರೂ ರೀತಿಯಿಂದ; ನನ್ನೇಲುಕೋ–ನನ್ನನ್ನು ಕಾಪಾಡಪ್ಪ; ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರ, ನಿನ್ನ ಪಾದಗಳೇ ನನಗೆ ಗತಿಯೆಂದು ನಂಬಿದ್ದೇನೆ.

* * *

೩೦

ರಾಗ : ಸಿಂಹೇಂದ್ರಮಧ್ಯಮ    ತಾಳ : ಆದಿ

ವೀಣಾ ಕುಪ್ಪಯ್ಯರ್

ಪಲ್ಲವಿ : ಮಮ್ಮು ಬ್ರೋಚುಪಟ್ಲ ನೀಕಿಂತ ಮನಸು ರಾವದೇಮಿ ಸಾಮಿ (ಮಮ್ಮು)

ಅನುಪಲ್ಲವಿ : ಈ ಮಹಿನಿ ವೆಲಯು ಶ್ರೀ ಶೇಷಗಿರೀಶ ಸುಪ್ರಕಾಶ ವೆಂಕಟೇಶ (ಮಮ್ಮು)

ಚರಣ : 1 ನಿಜಭಕ್ತಿತೋಡ ನೀ ಪದಯುಗಮುಲ
ನಿರತಮು ಪೂಜಿಂಚಿ ಧ್ಯಾನಿಂಚು
ಸುಜನುಲು ಜೇರಿ ನೀ ಗುಣಕಥಲನು
ಸೊಮ್ಮು ಮೀರಗನು ಪಾಡುಚುನ್ನ (ಮಮ್ಮು)

2 ಇಭರಕ್ಷಕ ಈ ಕಲಿಮಾನವುಲ
ಕಿಷ್ಟ ಕಾಮಿತಫಲಮುಲೊಸಂಗೆಡು
ಶುಭದಾಯಕುಡನಿ ವಿನಿ ನೀ ಸನ್ನಿಧಿ
ಜೊಚ್ಚಿ ಚಾಲ ವಂದನಮೊನರಿಂಚಿನ (ಮಮ್ಮು)

3 ನೀಲಮೇಘನಿಭದೇಹ ಶ್ರೀ ಅಲಮೇಲು ಮಂಗ
ಹೃದಯಪಂಕಜ ಕೀರ
ಬಾಲ ವೇಣುಗೋಪಾಲದಾಸ ಪರಿ-
ಪಾಲ ಕರುಣಾಲವಾಲ ಶ್ರೀಲೋಲ (ಮಮ್ಮು)

**ಪ್ರತಿಪದಾರ್ಥ :** ಈ ಮಹಿನಿ–ಈ ಭೂಮಂಡಲದಲ್ಲಿ ; ವೆಲಯು–ಪ್ರಸಿದ್ಧನಾದ ; ಶ್ರೀ ಶೇಷಗಿರೀಶ–ಶೇಷಾಚಲ ಪರ್ವತದಲ್ಲಿ ನೆಲಸಿರುವ ; ಸುಪ್ರಕಾಶ ವೆಂಕಟೇಶ–ಪ್ರಕಾಶಭರಿತನಾದ ಶ್ರೀ ವೆಂಕಟೇಶ್ವರನೇ ; ಮಮ್ಮು–ನಮ್ಮನ್ನು ; ಬ್ರೋಚುಪಟ್ಲ–ಕಾಪಾಡಲು ; ನೀಕು–ನಿನಗೆ ; ಇಂಕ ಮನಸು ರಾವದೇಮಿ–ಇನ್ನೂ ಮನಸ್ಸು ಬರಲಿಲ್ಲವೆ ; ಸಾಮಿ–ಸ್ವಾಮಿ ; ನಿಜಭಕ್ತಿತೋಡ–ನಿಜವಾದ ಭಕ್ತಿಯಿಂದ ; ನೀ ಪದಯುಗಮುಲ–ನಿನ್ನ ಪಾದಕಮಲಗಳನ್ನು ; ನಿರತಮು–ಯಾವಾಗಲೂ ; ಪೂಜಿಂಚಿ ಧ್ಯಾನಿಂಚು–ಪೂಜಿಸಿ ಧ್ಯಾನಿಸುತ್ತಿರುವ ; ಸುಜನುಲು ಜೇರಿ–ಸಜ್ಜನರೊಂದಿಗೆ ಸೇರಿಕೊಂಡು ; ನೀ ಗುಣಕಥಲನು–ನಿನ್ನ ಗುಣಕಥನವನ್ನು ; ಸೊಮ್ಮು ಮೀರಗನು–ಮೈಮರೆಯುವಂತೆ ; ಪಾಡುಚುನ್ನ–ಹಾಡುತ್ತಿರುವ ; ನಮ್ಮನ್ನು ಕಾಪಾಡಲು ನಿನಗಿನ್ನೂ ಮನಸ್ಸು ಬರಲಿಲ್ಲವೆ ? ಇಭರಕ್ಷಕ–ಗಜೇಂದ್ರನನ್ನು ರಕ್ಷಿಸಿದವನೆ ; ಈ ಕಲಿಮಾನವುಲಕು–ಈ ಕಲಿಯುಗದ ಮಾನವರಿಗೆ ; ಇಷ್ಟಕಾಮಿತಫಲಮು–ಬಯಸಿದ ಇಷ್ಟಾರ್ಥವನ್ನು ; ಒಸಂಗೆಡು–ಕೊಡುವವನೆಂದು ; ಶುಭದಾಯಕುಡು–ಶುಭದಾಯಕನಾದವನು ಎಂದು ; ವಿನಿ–ಕೇಳಿ ; ನೀ ಸನ್ನಿಧಿಜೊಚ್ಚಿ–ನಿನ್ನ ಸನ್ನಿಧಿಯನ್ನು ಸೇರಿ ; ಚಾಲ–ಚೆನ್ನಾಗಿ (ಭಕ್ತಿಯಿಂದ) ವಂದನಮೊನರಿಂಚಿನ–ನಮಸ್ಕಾರ ಮಾಡುತ್ತಿರುವ ; ನೀಲಮೇಘನಿಭದೇಹ–ನೀಲಿಯ ಮೋಡಕ್ಕೆ ಎಣೆಯಾಗಿರುವ ದೇಹಕಾಂತಿಯುಳ್ಳವನೆ ; ಶ್ರೀ ಅಲಮೇಲುಮಂಗ ಹೃದಯಪಂಕಜ ಕೀರ–ಶ್ರೀ ಅಲಮೇಲು ದೇವಿಯ (ಲಕ್ಷ್ಮಿಯ) ಹೃದಯವೆಂಬ ಪಂಜರದಲ್ಲಿ ಗಿಣಿಯಂತಿರುವವನೆ ; ಬಾಲ ವೇಣುಗೋಪಾಲದಾಸನನ್ನು ಪರಿಪಾಲಿಸುವವನೆ ; ಕರುಣಾಲವಾಲ–ಕರುಣೆಯ ಸಮುದ್ರವಾಗಿರುವವನೆ ; ಶ್ರೀಲೋಲನೆ, ನಮ್ಮನ್ನು ಕಾಪಾಡಲು ಇನ್ನೂ ಮನಸ್ಸು ಬರಲಿಲ್ಲವೆ ?

* * *

೩೧

ರಾಗ : ಕಾಮವರ್ಧಿನಿ ತಾಳ : ಆದಿ

ತ್ಯಾಗರಾಜರು

ಪಲ್ಲವಿ : ರಘುವರ ನನ್ನು ಮರವತಗುನಾ (ರಘುವರ)

ಅನುಪಲ್ಲವಿ : ನಗಧರ ಭಕ್ತಜನಾಘನಿವಾರಣ (ರಘುವರ)

ಚರಣ : 1 ತಲ್ಲಿತಂಡ್ರುಲನ್ನತಮ್ಮುಲುಯುನ್ನ
ಪೊಲತಿಕಿಯೊಕ್ಕಡು ಪುರುಷುಡುಯೌನಾ (ರಘುವರ)

2 ಪರದೈವಮುಲು ಬಾಗು ಸೊಮ್ಮುಲು
ಸುರನುತ ಮಂಗಳಸೂತ್ರಮುಲೌನಾ (ರಘುವರ)

3 ಜೇಸಿನ ಪುಣ್ಯಚಯಮು ಬ್ರಾಹ್ಮಣ್ಯ
ಆಸನೊಸಂಗಿತಿ ಅನುಪಮ ಲಾವಣ್ಯ (ರಘುವರ)

4 ಮನಸುನ ನೀಕೇ ಮರುಲುಕೊನ್ನಾನು ಸ
ಜ್ಜನಹಿತ ತ್ಯಾಗರಾಜನುತ ಶುಭಕರ (ರಘುವರ)

**ಪ್ರತಿಪದಾರ್ಥ :** ನಗಧರ–ಪರ್ವತವನ್ನು (ಗೋವರ್ಧನ) ಎತ್ತಿ ಹಿಡಿದವನೆ; ಭಕ್ತಜನ–ಭಕ್ತ ಜನರ; ಆಘ ನಿವಾರಣ–ಪಾಪವನ್ನು ನಿವಾರಿಸುವವನೆ; ರಘುವರ–ಶ್ರೀರಾಮಚಂದ್ರ; ನನ್ನು–ನನ್ನನ್ನು; ಮರವ ತಗುನಾ–ಮರೆಯುವುದು ಸರಿಯೆ ?; ಪೊಲತಿಕಿ–ಯುವತಿಯಾದವಳಿಗೆ; ತಲ್ಲಿ ತಂಡ್ರುಲು–ತಾಯಿ ತಂದೆ; ಅನ್ನ ತಮ್ಮುಲು–ಅಣ್ಣ ತಮ್ಮಂದಿರು; ಯುನ್ನ–ಇದ್ದರೆ (ಇದ್ದ ಮಾತ್ರಕ್ಕೆ ಎಂದು ಭಾವ); ಒಕ್ಕಡು ಪುರುಷಡುಯೌನಾ–ಪತಿ ಇದ್ದಂತೆ ಆಗುತ್ತದೆಯೆ; ಪರದೈವಮುಲ– ದೇವತೆಗಳಿಗೆ; ಬಾಗು ಸೊಮ್ಮುಲು–ಒಳ್ಳೆಯವೆನಿಸಿದ ಒಡವೆಗಳಾದರೂ (ಅವು); ಸುರನುತ–ದೇವತೆಗಳೂ ಕೊಂಡಾಡುವ; ಮಂಗಳ ಸೂತ್ರಮುಲೌನಾ–ಮಂಗಳಸೂತ್ರಕ್ಕೆ ಸಮನಾಗುತ್ತವೆಯೆ; ಜೇಸಿನ–ನಾನು ಮಾಡಿದ; ಪುಣ್ಯಚಯಮು–ಪುಣ್ಯಸಮೂಹದಿಂದ; ಬ್ರಾಹ್ಮಣ್ಯ–ಬ್ರಾಹ್ಮಣತ್ವವೂ; ಆಸನೊಸಂಗಿತಿ–ಆಸೆಪಟ್ಟೆನು; ಅನುಪಮ ಲಾವಣ್ಯ–ಹೋಲಿಕೆಗೆ ಎಣೆಯಿಲ್ಲದ ಸೌಂದರ್ಯ ವುಳ್ಳವನೆ; ಮನಸುನ–ಮನಸ್ಸಿನಲ್ಲಿ; ನೀಕೇ ಮರುಲುಕೊನ್ನಾನು–ನಿನಗಾಗಿಯೇ ಹಂಬಲಿಸುತ್ತಿದ್ದೇನೆ; ಸಜ್ಜನಹಿತ– ಸಜ್ಜನರಿಗೆ ವಿಶ್ವಾಸಿಯಾದ; ತ್ಯಾಗರಾಜನುತ–ತ್ಯಾಗರಾಜನಿಂದ ಸ್ತುತನಾದವನೆ, ಶುಭಕರನೆ, ನನ್ನು ಮರವ ತಗುನಾ– ನನ್ನನ್ನು ಮರೆಯಬಹುದೆ ?

**ತಾತ್ಪರ್ಯ :** ಶ್ರೀರಾಮಚಂದ್ರ ನನ್ನನ್ನು ನೀನು ಮರೆಯುವುದು ಸರಿಯೆ ? ಇಲ್ಲಿ ತ್ಯಾಗರಾಜರು ತನಗೆ ಬೇರೆ ಯಾರಿದ್ದರೇನು, ತನ್ನ ಆರಾಧ್ಯದೈವದ ಕರುಣೆ ಇದ್ದುದಕ್ಕೆ ಸಮಾನವಾಗುತ್ತದೆಯೆ ಎಂದು ಆಲೋಚಿಸುತ್ತಾರೆ. ಯುವತಿ ಯಾದವಳಿಗೆ ತಂದೆ ತಾಯಿ ಅಣ್ಣ ತಮ್ಮ ಬಂಧು ಬಳಗ ಯಾರಿದ್ದರೂ, ಪತಿ ಇದ್ದಂತೆ ಆಗುತ್ತದೆಯೆ ? ದೇವತೆಗಳಿಗೇ ಆಕರ್ಷಕ ವೆನಿಸುವಂತಹ ಆಭರಣಗಳಿದ್ದರೇನು, ದಿವ್ಯ ಮಂಗಳಸೂತ್ರ (ಮಾಂಗಲ್ಯ) ಕ್ಕೆ ಅವು ಸಮನಾಗುತ್ತವೆಯೆ ? ನಿನಗಾಗಿ ಹಂಬಲಿಸು ತ್ತಿದ್ದೇನೆ. ನನ್ನನ್ನು ಕಾಪಾಡು ಎನ್ನುತ್ತಾರೆ.

* * *

೧೬

ರಾಗ : ಕೇದಾರ ತಾಳ : ರೂಪಕ

ಆನಯ್ಯ

ಪಲ್ಲವಿ : ಭಜನ ಸೇಯವೇ ಓ ಮನಸಾ ಪ್ರಣತಾರ್ಥಿಹರುನಿ

ಅನುಪಲ್ಲವಿ : ಅಜಪುರಂದರಾದುಲಕು ಆದಿಗಾವೆಲಯು ಮೂರ್ತಿನಿ

ಚರಣ : 1. ಕಪಟನಾಟಕ ಸೂತ್ರಮುನ ಕಟ್ಟುಬಡಿ ಕಷ್ಟಮುಜೆಂದಗ
ಜಪತಪಮುಲ ಸಾಧನಚೇ ಚಂಚಲಮು ದೀರ್ಚಿ ಸದಾ

2. ಅಂಬರಕೇಶ ದಿಗಂಬರ ಕರುಣಾಕರುನಿ
ಅಂಬಿಕಾರಮಣುನಿ ಪಾದಾಂಬುಜಮುನ ಮದಿಬೂನಿ

3. ಉಮಾದಾಸು ಕುಲಧನಮ್ವೈ ಊರ್ಜಿತಂಬುಗಾವೆಲಸಿನ
ಕುಮಾರ ಗಜಮುಖುನಿಕನ್ನ ಕುಂದರದನುನಿ ಗುರಿಂಚಿ

**ಪ್ರತಿಪದಾರ್ಥ :** ಓ ಮನಸಾ–ಎಲೈ ಮನಸ್ಸೇ ; ಪ್ರಣತಾರ್ಥಿಹರುನಿ–ಭಕ್ತರ ದುಃಖಗಳನ್ನು ಪರಿಹರಿಸುವ ಪರಮೇಶ್ವರನನ್ನು ; ಭಜನಸೇಯವೇ–ಭಜನೆಮಾಡು ; ಅಜ–ಬ್ರಹ್ಮ; ಪುರಂದರ–ಇಂದ್ರ ; ಆದುಲಕು–ಮುಂತಾದವರಿಗೆ ; ಆದಿಗಾವೆಲಯು ಮೂರ್ತಿನಿ–ಆದಿಮೂರ್ತಿಯಾಗಿರುವ ಶಿವನನ್ನು (ಭಜಿಸು) ; ಕಪಟನಾಟಕ ಸೂತ್ರಮುನ–ಕಪಟನಾಟಕವೆಂಬ ಜಾಲದಲ್ಲಿ ; ಕಟ್ಟುಬಡಿ–ಸಿಕ್ಕಿಬಿದ್ದು, ಕಟ್ಟುಬಿದ್ದು ; ಕಷ್ಟಮು ಜೆಂದಗ–ಕಷ್ಟಪಡದೆ ; ಜಪ ತಪಮುಲ–ಜಪ ತಪಸ್ಸುಗಳೆಂಬ ; ಸಾಧನಚೇ–ಸಾಧನೆಯಿಂದ ; ಚಂಚಲಮು–(ಮನಸ್ಸಿನ) ಚಾಂಚಲ್ಯವನ್ನು ದೀರ್ಚಿ–ಕಳೆದು ಸದಾ–ಯಾವಾಗಲೂ ಭಜನೆ ಮಾಡು. ಅಂಬರಕೇಶ–ಆಕಾಶವೇ ಕೇಶವಾಗಿರುವವನೂ ; ದಿಗಂಬರ–ದಿಕ್ಕುಗಳೇ ವಸ್ತ್ರವಾಗಿರುವವನೂ ; ಕರುಣಾಕರುನಿ–ಕರುಣೆಗೆ ಆಕರನಾಗಿರುವವನೂ ; ಅಂಬಿಕಾರಮಣನೂ ಆದ ಶಿವನಲ್ಲಿ ; ಮದಿಬೂನಿ–ಮನಸ್ಸಿಟ್ಟು (ಭಜನೆಮಾಡು). ಉಮಾದಾಸು ಕುಲಧನಮ್ವೈ–ಉಮಾದಾಸನ ಕುಲಧನವು ; ಊರ್ಜಿತಂಬುಗಾವೆಲಸಿನ-ಅಭಿವೃದ್ಧಿಯಾಗುತ್ತಿರುವಂತೆ ಮಾಡಿರುವ ; ಕುಮಾರ ಗಜಮುಖುನಿಕನ್ನ–ಷಣ್ಮುಖ, ಗಜಮುಖರಿಗೆ ಹಿರಿಯನಾದ ; ಕುಂದರದನುನಿ–ಮಲ್ಲಿಗೆಯಂತೆ ಶುಭ್ರವಾದ ಹಲ್ಲುಗಳುಳ್ಳ ಶಿವನನ್ನು ; ಗುರಿಂಚಿ–ಗುರಿಯಾಗಿಟ್ಟುಕೊಂಡು ; ಎಲೆ ಮನಸ್ಸೆ, ಭಜನೆಮಾಡು.

**ತಾತ್ಪರ್ಯ :** ಬ್ರಹ್ಮ, ಇಂದ್ರ ಮೊದಲಾದ ಸಕಲ ದೇವತೆಗಳಿಗೂ ಆದಿಮೂರ್ತಿಯಾದ ಭಕ್ತರ ದುಃಖಗಳನ್ನು ಹೋಗಲಾಡಿಸುವ ಪರಮೇಶ್ವರನನ್ನು ಭಜನೆಮಾಡು, ಎಲೆ ಮನಸ್ಸೇ, ಭಜನೆಮಾಡು. ಈ ಜಗತ್ತಿನ ಕಪಟನಾಟಕ ಜಾಲದಲ್ಲಿ ಕಟ್ಟುಬೀಳಬೇಡ, ಕಷ್ಟಪಡಬೇಡ. ಜಪತಪಾದಿ ಸಾಧನೆಗಳಿಂದ ಚಂಚಲತೆಯನ್ನು ಹೋಗಲಾಡಿಸಿಕೊಂಡು ಅವನನ್ನು ಭಜಿಸು. ಆಕಾಶವೇ ಸಿರಿಮುಡಿಯಾದವನೂ, ದಿಕ್ಕುಗಳೇ ಅಂಬರವಾದವನೂ, ಕರುಣಾಕರನೂ, ಅಂಬಿಕಾರಮಣನೂ ಆದ ಶಿವನನ್ನು ; ಉಮಾದಾಸನ ಕುಲಧನನಾದ, ಅವನ ಶ್ರೇಯೋಭಿವೃದ್ಧಿಗಳಿಗೆ ಕಾರಣನಾದ, ಷಣ್ಮುಖ ಗಜಮುಖರಿಗೆ ಹಿರಿಯನಾದ ಪರಮಶಿವನನ್ನು ಭಜಿಸು.

* * *

೩೨

ರಾಗ : ಕಾಮವರ್ಧಿನಿ ತಾಳ : ತ್ರಿಶ್ರ ಏಕ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ರಾಮನಾಥಂ ಭಜೇಹಂ ರಾಮಚಂದ್ರಪೂಜಿತಂ

ಅನುಪಲ್ಲವಿ : ಕಾಮಿತಫಲಪ್ರದ ದೇವಂ ಕೋಟಿತೀರ್ಥ ಪ್ರಭಾವಂ
ಕುಮಾರ ಗುರುಗುಹ ಮಹಿತಂ ಕಪಿಬೃಂದಾದಿ ಸನ್ನುತಂ (ರಾಮನಾಥಂ)

ಚರಣ : ಸೇತು ಮಧ್ಯ ಗಂಧಮಾದನಪರ್ವತ ವಿಹಾರಂ
ಸದಾ ಪರ್ವತವರ್ಧಿನಿ ಮನೋಲ್ಲಾಸಕರಂ
ಹಸ್ತಾಮಲಕ ನತವರಂ ಹಾಟಕಮಯ ಹಾರಧರಂ
ಹತ್ಯಾದಿ ಪಾಪಹರಂ ಹಂಸಸ್ಸೋಹಾಕಾರಂ (ರಾಮನಾಥಂ)

**ಪ್ರತಿಪದಾರ್ಥ :** ರಾಮಚಂದ್ರ ಪೂಜಿತಂ–ಶ್ರೀರಾಮಚಂದ್ರನಿಂದ ಪೂಜೆಗೊಂಡ; ರಾಮನಾಥಂ–ರಾಮನಾಥೇಶ್ವರನನ್ನು; ಭಜೇಹಂ–ಭಜಿಸುತ್ತೇನೆ. ಕಾಮಿತಫಲಪ್ರದ ದೇವಂ–ಬಯಸಿದ ಫಲಗಳನ್ನು ನೀಡುವಂತಹ ದೇವನನ್ನು; ಕೋಟಿ ತೀರ್ಥ–ಕೋಟಿ ತೀರ್ಥಗಳ; ಪ್ರಭಾವಂ–ಮಹಿಮೆಯುಳ್ಳವನನ್ನು; ಕುಮಾರ ಗುರುಗುಹ ಮಹಿತಂ–ಕುಮಾರ ಷಣ್ಮುಖನಿಂದ ಮಹಿಮೆ ತಳೆದವನನ್ನು; ಕಪಿಬೃಂದಾದಿ ಸನ್ನುತಂ–ವಾನರಸಮೂಹದಿಂದ ಸ್ತುತನಾದವನನ್ನು (ಭಜೇಹಂ) ಸೇತುಮಧ್ಯ ಗಂಧಮಾದನಪರ್ವತ ವಿಹಾರಂ–ರಾಮಸೇತುವಿನ ಮಧ್ಯದ ಗಂಧಮಾದನಪರ್ವತದಲ್ಲಿ ವಿಹಾರ ಮಾಡುವವನನ್ನು; ಸದಾ ಪರ್ವತವರ್ಧಿನಿ ಮನೋಲ್ಲಾಸಕರಂ–ಯಾವಾಗಲೂ ಪರ್ವತವರ್ಧಿನಿಯ (ಪಾರ್ವತಿಯ) ಮನಸ್ಸಿಗೆ ಉಲ್ಲಾಸ ಉಂಟು ಮಾಡುವವನನ್ನು; ಹಸ್ತಾಮಲಕ ನತವರಂ–ಹಸ್ತಾಮಲಕ ಮುನಿಗಳಿಂದ ನಮಸ್ಕೃತನಾದವನನ್ನು; ಹಾಟಕಮಯ ಹಾರಧರಂ–ಶ್ರೇಷ್ಠವಾದ ರತ್ನಗಳಿಂದ ಕೂಡಿದ ಹಾರ ಧರಿಸಿದವನನ್ನು; ಹತ್ಯಾದಿ ಪಾಪಹರಂ–ಬ್ರಹ್ಮಹತ್ಯೆಯೇ ಮೊದಲಾದ ಪಾಪಗಳನ್ನು ಹೋಗಲಾಡಿಸುವವನನ್ನು; ಹಂಸ ಸೋಹಾಕಾರಂ–ಪರಮಹಂಸಸ್ವರೂಪಿಯೂ, ಸೋಹಾಕಾರನೂ ಆದವನನ್ನು ಭಜಿಸುತ್ತೇನೆ.

* * *

೩೩

ರಾಗ : ಕಾಮವರ್ಧಿನಿ ತಾಳ : ರೂಪಕ ಭದ್ರಾಚಲ ರಾಮದಾಸರು

ಪಲ್ಲವಿ : ಎನ್ನಗಾನು ರಾಮಭಜನ ಕನ್ನಮಿಕ್ಕಿಲುನ್ನದಾ

ಅನುಪಲ್ಲವಿ : ಸನ್ನುತಿಂಚಿ ಶ್ರೀರಾಮಚಂದ್ರು ದಲಚವೇ ಮನಸಾ
ಕನ್ನಪಿನ್ನವಾರಿ ವೇಡುಕೊನ್ನನೇಮಿ ಫಲಮು ಮನಸಾ (ಎನ್ನಗಾನು)

ಚರಣ : 1 ಶಾಪ ಕಾರಣಮು ಅಹಲ್ಯ ಚಾಪರಾತಿ ಚಂದ ಮಾಯೆ
ಪಾಪಮೆಲ್ಲ ಬಾಸೆ ರಾಮುಪದಮು ಸೋಕಗಾ
ರೂಪವತುಲಲೋನಧಿಕರೂಪ ರೇಖಮುಲನು ಗಲಿಗೇ
ರೇಪಗಲುನು ಜೂಡ ಪುಣ್ಯರೂಪ ಕನ್ನೆಕಾಯಗ (ಎನ್ನಗಾನು)

2 ಶರಣುಜೊಚ್ಚಿನಟ್ಟಿವಾನಿ ಕರುಣಜೂಚು ರಾಮುಶರಮು
ಶರಮು ಕನ್ನ ಮರಿಯು ತರ ಶರಮುಯುನ್ನದಾ
ಪರಮದ್ರೋಹಿಯೈನ ಕಾಕಾಸುರುನಿ ಜೂಚಿ ಕೋಪಗಿಂಚಿ
ಪರಮದಯನು ಬ್ರೋಚೆಗಾಕ ಭಂಗಪರಚ ಜೂಚೆನಾ (ಎನ್ನಗಾನು)

3 ರಾಮಚಿಲುಕ ನೊಕತೆಪೆಂಚಿ ಪ್ರೇಮಮಾಟಲಾಡ ನೇರ್ಪೆ
ರಾಮ ರಾಮ ರಾಮಯನುಚು ರಮಣಿಯೊಕ್ಕತೇ
ಪ್ರೇಮಮಿಾರಭದ್ರಾದ್ರಿ ಧಾಮುಡೈನ ರಾಮವಿಭುಡು
ಕಾಮಿತಾರ್ಥ ಫಲಮುನಿಚ್ಚಿ ಕೈವಲ್ಯಮೊಸಗಲೇದಾ (ಎನ್ನಗಾನು)

**ಪ್ರತಿಪದಾರ್ಥ :** ಎನ್ನಗಾನು–ನೆನೆಯಲು ; ರಾಮಭಜನಕನ್ನ–ರಾಮನಾಮ ಭಜನೆಗಿಂತ ; ಮಿಕ್ಕಿಲುನ್ನದಾ–ಅಧಿಕವಾದುದು ಇದೆಯೇ ; ಸನ್ನುತಿಂಚು–ಸ್ತುತಿಪಾತ್ರನಾದ ; ಶ್ರೀರಾಮಚಂದ್ರುನಿ–ಶ್ರೀರಾಮಚಂದ್ರನನ್ನು ; ದಲಚವೇ ಮನಸಾ–ಮನಸ್ಸೇ ನೆನೆಯುವವನಾಗು ; ಕನ್ನಪಿನ್ನವಾರಿ–ಸಿಕ್ಕಿದವರನ್ನು ; ವೇಡಿಕೊನ್ನನೇಮಿಫಲಮು–ಬೇಡಿಕೊಂಡಲ್ಲಿ ಫಲವೇನು ? ಮನಸಾ–ಮನಸ್ಸೇ ; ಶಾಪ ಕಾರಣಮು–ಶಾಪದ ಕಾರಣದಿಂದಾಗಿ ; ಅಹಲ್ಯ–ಅಹಲ್ಯೆಯು ; ಚಾಪರಾತಿ ಚಂದ ಮಾಯೆ–ಕಲ್ಲುರೂಪ ಪಡೆದಳು ; ಪಾಪಮೆಲ್ಲ ಬಾಸೆ ರಾಮುಪದಮು ಸೋಕಗ–ರಾಮಚಂದ್ರನ ಪಾದಗಳು ಸೋಕಲು ಪಾಪ ಪರಿಹಾರವಾಯಿತು ; ರೂಪವತುಲಲೊ–ರೂಪವತಿಯರಲ್ಲಿ ; ಅಧಿಕರೂಪ ರೇಖಮುಲನು ಗಲಿಗೆ–ಹೆಚ್ಚಾದ ರೂಪವನ್ನು ಹೊಂದಿರುವ ; ರೇಪಗಲನು ಜೂಡ ರೂಪಕನ್ನೆ ಕಾಯಗಾ–ಹಗಲು ರಾತ್ರಿಯೂ ನೋಡುವುದಕ್ಕೆ ಆಹ್ಲಾದವನ್ನುಂಟುಮಾಡುವ ರೂಪವತಿಯಾದ ಹೆಣ್ಣಾದಳು. ಶರಣುಜೊಚ್ಚಿನಟ್ಟಿವಾನಿ ಕರುಣಜೂಚು ರಾಮುಶರಮು–ಶರಣಾರ್ಥಿ ಜನಗಳನ್ನು ಕರುಣೆಯಿಂದ ನೋಡುವ ರಾಮಬಾಣ ; ಶರಮುಕನ್ನ ಮರಿಯು ಶರಮುಯುನ್ನದಾ–ಅದಕ್ಕಿಂತಲೂ ಉನ್ನತವಾದ ಬೇರೊಂದು ಬಾಣವುಂಟೆ ; ಪರಮ ದ್ರೋಹಿಯೈನ ಕಾಕಾಸುರುನಿ ಜೂಚಿ ಕೋಪಗಿಂಚಿ–ಪರಮ ದ್ರೋಹಿಯಾದ ಕಾಕಾಸುರನನ್ನು ಕಂಡು ಕೋಪಗೊಂಡು ; ಪರಮ ದಯನು ಬ್ರೋಚೆಗಾಕ ಭಂಗಪರಚ ಜೂಚೆನಾ–ಅಪರಿಮಿತವಾದ ದಯೆಯನ್ನು ತೋರಿಸಿದನೇ ಹೊರತು ಅವನಿಗೆ ಅಪಮಾನ ಮಾಡಲು ನೋಡಿದನೇ ? ರಾಮಚಿಲುಕನೊಕತೆ ಪೆಂಚಿ–ಒಂದು ಗಿಳಿಯನ್ನು ತಂದು ; ಪ್ರೇಮ ಮಾಟಲಾಡ ನೇರ್ಪೆ ರಾಮ ರಾಮ ರಾಮ ಯನುಚು ರಮಣಿಯೊಕ್ಕತೆ–ಸ್ತ್ರೀಯೊಬ್ಬಳು ರಾಮ ರಾಮ ಎಂಬ ಹಿತವಾದ ಮಾತುಗಳನ್ನು ಕಲಿಸಿದಳು ; ಪ್ರೇಮ ಮಿಾರ–ಪ್ರೇಮವು ಅಧಿಕರಿಸಲು ; ಭದ್ರಾದ್ರಿಧಾಮುಡೈನ–ಭದ್ರಾಚಲ ಸ್ವಾಮಿಯಾದ ; ರಾಮವಿಭುಡು–ರಾಮಚಂದ್ರನು ; ಕಾಮಿತಾರ್ಥಫಲಮುಲಿಚ್ಚಿ–ಕಾಮಿತ ಫಲಗಳನ್ನು ಪಾಲಿಸಿ ; ಕೈವಲ್ಯಮೊಸಗಲೇದಾ–ಕೈವಲ್ಯ ಪದವಿಯನ್ನು ಕರುಣಿಸಲಿಲ್ಲವೇ ?

* * *

## ೩೪

ಸ್ವಾತಿ ತಿರುನಾಳ್ ಮಹಾರಾಜರು

ರಾಗ : ಶುದ್ಧಸಾವೇರಿ ತಾಳ : ಛಾಪು

ಪಲ್ಲವಿ :
ಜನನೀ ಪಾಹಿ ಸದಾ ಜಗದೀಶೇ ದೇವಿ
ಸ್ಮರಹರ ವಲ್ಲಭೇ (ಜನನೀ)

ಅನುಪಲ್ಲವಿ :
ಅನವದ್ಯತರ ನವಹಾರಾಲಂಕೃತೆ ಮಂಜು
ವನಜಾಯತ ಲೋಚನೆ ವಾಹಿನೀತಟ ವಾಸೆ (ಜನನೀ)

ಚರಣ :
1 ಶೈಲರಾಜ ತನಯೇ ಚಂಡ ಮುಂಡ ನಾಶಿನಿ
ಶೂಲಶೋಭಿತಕರೇ ಸುಂದರರೂಪೇ
ಫಾಲರಾಜಿ ತಿಲಕೇ ಪರನು ಕೃಪಾವತಿ
ಪಾಲಿತ ಸುಜನಮಾಲಿಕೇ ಸುರ
ಸಾಲ ಕಿಸಲಯ ಚಾರು ನಿಜಪದೇ (ಜನನೀ)

2 ಮಹಿತ ಬಾಹುಬಲ ಮಹಿಷಾಸುರಾದಿ
ಗಹನ ದಹನಾಯಿತೇ ಗತಮದ ಸೇವ್ಯೆ
ಸುಹಸಿತ ಜಿತ ಕುಂದೇ ಶೋಣ ಜಪಾಧರೆ
ವಿಹರ ಮಮ ಹೃದಿ ವಿಧುಸದೃಶ ಮುಖಿ
ಬಹಲ ಮಲಯಜ ಬಂಧುರೆ ಲೋಕ (ಜನನೀ)

3. ಪರಮಪಾವನ ಶ್ರೀ ಪದ್ಮನಾಭಸಹೋದರಿ
ನೀಲಚಿಕುರೇ ಕೇಸರಿ ವರವಾಹೇ
ಚರಿತ ದೂರಿತ ಭಕ್ತ ದರ ನಿಕರೇ ಗೌರಿ
ಕುರುಕೃಪಾಂ ಮಯಿ ಕುಲಿಶಧರಮುಖ ಪರಿನುತೇ
ಘನದುರಿತ ಹೃದಿಲೋಲೆ (ಜನನೀ)

**ಪ್ರತಿಪದಾರ್ಥ** : ಜನನೀ ಸದಾ ಪಾಹಿ–ಜನನಿಯೇ ನನ್ನನ್ನು ಯಾವಾಗಲೂ ರಕ್ಷಿಸು ; ಜಗದೀಶೇ ಸ್ಮರಹರವಲ್ಲಭೇ ದೇವಿ–ಜಗದೀಶ್ವರಿಯೇ, ದೇವಿ, ಈಶ್ವರನ ಪತ್ನಿಯೇ ; ಅನವದ್ಯತರ ನವಹಾರಾಲಂಕೃತೆ–ಉತ್ತಮವಾದ ಹೊಸ ಹಾರದಿಂದ ಅಲಂಕೃತಳಾದವಳೆ ; ಮಂಜು ವನಜಾಯತ ಲೋಚನೆ–ಸುಂದರವಾದ ತಾವರೆಯಂತೆ ವಿಸ್ತಾರವಾದ ಕಣ್ಣುಳ್ಳವಳೇ ; ವಾಹಿನೀ ತಟ ವಾಸೆ–ನದಿಯ ದಡದಲ್ಲಿ ವಾಸಿಸುವವಳೇ ; ಶೈಲರಾಜ ತನಯೇ–ಗಿರಿರಾಜನ ಮಗಳೇ ; ಚಂಡ ಮುಂಡ ನಾಶಿನಿ–ಚಂಡ ಮುಂಡರನ್ನು ನಾಶ ಮಾಡಿದವಳೆ ; ಶೂಲಶೋಭಿತ ಕರೆ–ಶೂಲವನ್ನು ಕೈಯಲ್ಲಿ ಹಿಡಿದವಳೇ ; ಸುಂದರರೂಪೆ–ಸುಂದರವಾದ ರೂಪವುಳ್ಳವಳೇ ; ಫಾಲ ರಾಜಿತಿಲಕೇ–ಮುಂಗುರುಳು ಶೋಭಿಸುವ ಹಣೆಯಲ್ಲಿ ತಿಲಕ ಧರಿಸಿದವಳೆ ; ಪಾಲಿತ ಸುಜನ ಮಾಲಿಕೆ–ಸತ್ಪುರುಷರ ಸಮೂಹವನ್ನು ರಕ್ಷಿಸುವವಳೆ ; ಸುರಸಾಲ ಕಿಸಲಯ ಚಾರು ನಿಜಪದೇ–ದೇವದಾರುವಿನ ಚಿಗುರಿನಂತೆ ಸುಂದರವಾದ ಪಾದವುಳ್ಳವಳೇ ; ಮಹಿತ ಬಾಹು ಬಲ ಮಹಿಷಾಸುರಾದಿ ಗಹನ ದಹನಾಯಿತೇ–ಬಾಹುಬಲದಿಂದ ಕೊಬ್ಬಿದ ಮಹಿಷಾಸುರ ಮುಂತಾದ ರಕ್ಕಸರ ಕಾಡನ್ನು ಸುಟ್ಟವಳೆ ; ಗತಮದ ಸೇವ್ಯೆ–ನಿರ್ಗರ್ವಿಗಳಿಂದ ಸೇವಿಸಲ್ಪಡುವವಳೇ ; ಸುಹಸಿತ ಜಿತ ಕುಂದೆ–ಮುಗುಳ್ನಗೆಯಿಂದ ಮಲ್ಲಿಗೆಯನ್ನು ನಾಚಿಸುವವಳೇ ;

ವಿಧು ಸದೃಶ ಮುಖಿ–ಚಂದ್ರನಂತೆ ಮುಖವುಳ್ಳವಳೇ ; ಶೋಣ ಜಪಾಧರೆ–ಕೆಂಪುದಾಸವಾಳದಂತೆ ತುಟಿಯುಳ್ಳವಳೇ ; ಮಮ ಹೃದಿ ವಿಹರ–ನನ್ನ ಹೃದಯ ಬಹುಲ ಮಲಯಜ ಬಂಧುರೆ–ಬೀಸುವ ಶ್ರೀಗಂಧದ ವಾಸನೆಯಿಂದ ಸುವಾಸಿತಳಾದವಳೆ ; ಪರಮ ಶ್ರೇಷ್ಠನಾದ ದಲ್ಲಿ ವಿಹರಿಸು ; ಲೋಕಜನನೀ–ಜಗನ್ನಾಯಕಳೇ ; ಪರಮಪಾವನ ಶ್ರೀ ಪದ್ಮನಾಭ ಸಹೋದರಿ–ಪರಮ ಶ್ರೇಷ್ಠನಾದ ಪದ್ಮನಾಭನ ಸಹೋದರಿಯೇ ; ನೀಲಚಿಕುರೆ–ಕಪ್ಪು ಕೂದಲುಳ್ಳವಳೆ ; ಕೇಸರೀ ವರ ವಾಹೆ–ಉತ್ತಮವಾದ ಸಿಂಹವಾಹಿನಿಯೇ ; ಚರಿತದೂರಿತ ಭಕ್ತ ದರ ನಿಕರೇ–ಹೆದರಿದ ಭಕ್ತರ ಸಮೂಹವುಳ್ಳವಳೇ ; ಗೌರೀ–ಗೌರಿಯೇ ; ಕುಲಿಶ ಧರಮುಖ ಪರಿನುತೇ–ವಜ್ರವನ್ನು ಹಿಡಿದ ಇಂದ್ರನಿಂದ ಸ್ತುತಿಸಲ್ಪಟ್ಟವಳೇ ; ಘನದುರಿತ ಹೃದಿ ಲೋಲೆ–ಅತಿಯಾದ ಸಂಕಟವನ್ನು ಪರಿಹರಿಸುವವಳೇ ; ಗೌರಿ–ಗೌರಿಯೇ ; ಮಯಿ ಕೃಪಾಂ ಕುರು–ನನ್ನಲ್ಲಿ ಕೃಪೆ ಮಾಡು.

* * *

೩೫

ರಾಮನಾಡ್ ಶ್ರೀನಿವಾಸ ಅಯ್ಯಂಗಾರ್

ರಾಗ : ಶುದ್ಧಸಾವೇರಿ   ತಾಳ : ರೂಪಕ

ಪಲ್ಲವಿ : ಸಾಮಜವರದಾ ನೀಕು ಸರಿಯೆವ್ವರಯ್ಯ ರಾಮ (ಸಾಮಜ)

ಅನುಪಲ್ಲವಿ : ಕಾಮಜನಕ ಶುಭಫಲದ ಕರುಣಾಲವಾಲ (ಸಾಮಜ)

ಚರಣ : ಪರಮಾನಂದಕರುಡನಿ ನಿನ್ನು ಭಕ್ತಿತೋನು ಗೊಲಿಚಿಯುಂಡೆ
ಪರಮ ಪವಿತ್ರುಲಕು ನೀದು ಪರಮಾರ್ಥಮುಲೊಸಗು
ವರ ಶೇಷಾಚಲೇಂದ್ರುಡೌ ಶ್ರೀನಿವಾಸುಡನಿ ಚೆಪ್ಪಬಡಿನ

ಸಾರಸದಳ ನಯನುನಿ ಅಪಾರ ಮಹಿಮಲನು ದೆಲಿಸಿನ
ನಾರದಮುನಿವಿನುತ ಪಾರ್ಥಸಾರಥಿಯನಿ ಪೊಗಡಿಕ ಗಲ (ಸಾಮಜ)

**ಪ್ರತಿಪದಾರ್ಥ :** ಸಾಮಜವರದಾ–ಆನೆಗೆ (ಗಜೇಂದ್ರನಿಗೆ) ಅನುಗ್ರಹ ಮಾಡಿದ ; ರಾಮ–ಶ್ರೀರಾಮಚಂದ್ರನೆ ; ನೀಕು–ನಿನಗೆ ; ಸರಿಯೆವ್ವರಯ್ಯ–ಸಮಾನರು ಯಾರಿದ್ದಾರೆ ? ; ಕಾಮಜನಕ–ಮನ್ಮಥನಿಗೆ ತಂದೆಯಾದ ; ಶುಭಫಲದ–ಶುಭಫಲಗಳನ್ನು ನೀಡುವ ; ಕರುಣಾಲವಾಲ–ಕರುಣೆಗೆ ಸಮುದ್ರದಂತಿರುವ ಶ್ರೀರಾಮಚಂದ್ರ, ನಿನಗೆ ಯಾರು ಸರಿ ? ಪರಮಾನಂದಕರುಡು ಅನಿ–ನೀನು ಪರಮ ಆನಂದವನ್ನು ಉಂಟುಮಾಡುವವನು ಎಂಬುದಾಗಿ ; ನಿನ್ನು–ನಿನ್ನನ್ನು ; ಭಕ್ತಿತೋನು–ಭಕ್ತಿಯಿಂದ ; ಗೊಲಿಚಿಯುಂಡೆ–ಸ್ತುತಿಸುತ್ತಿರುವ ; ಪರಮ ಪವಿತ್ರುಲಕು–ಪವಿತ್ರರಾದ ಜನರಿಗೆ ; ನೀದು ಪರಮಾರ್ಥಮುಲೊಸಗು–ಪರಮಾರ್ಥವನ್ನೇ (ಮೋಕ್ಷವನ್ನೇ) ನೀನು ಕೊಡುತ್ತೀಯೆ ; ವರ ಶೇಷಾಚಲೇಂದ್ರುಡೌ–ಶ್ರೇಷ್ಠವಾದ ಶೇಷಾಚಲ ಪರ್ವತದಲ್ಲಿ ನೆಲಸಿರುವ ; ಶ್ರೀನಿವಾಸುಡನಿ–ಶ್ರೀನಿವಾಸನೆಂದು ; ಚೆಪ್ಪಬಡಿನ–ಹೇಳಲ್ಪಡುವ ; ಸಾರಸದಳನಯನುನಿ–ತಾವರೆಯ ದಳದಂತೆ ಕಣ್ಣುಗಳುಳ್ಳವನೆಂದು ; ಅಪಾರ ಮಹಿಮಲನು ದೆಲಿಸಿನ–ನಿನ್ನ ಅಪಾರ ಮಹಿಮೆಯನ್ನು ತಿಳಿದುಕೊಂಡ ; ನಾರದಮುನಿಯಿಂದ ; ವಿನುತ–ಸ್ತುತನಾದ ; ಪಾರ್ಥಸಾರಥಿಯನಿ–ಪಾರ್ಥನಿಗೆ ಸಾರಥಿಯಾದವನೆಂದು ; ಪೊಗಡಿಕಗಲ–ಹೊಗಳಿಕೆಗೆ ಪಾತ್ರನಾದ ಶ್ರೀರಾಮಚಂದ್ರ, ನಿನಗೆ ಸಮಾನರು ಬೇರೆ ಯಾರಿದ್ದಾರೆ ?

**ಟಿಪ್ಪಣಿ :** ಆನೆಗೆ ಅನುಗ್ರಹ ಮಾಡಿದವನು ಎಂಬುದು ಗಜೇಂದ್ರಮೋಕ್ಷದ ಕತೆ. ಮೊಸಳೆಯ ಬಾಯಿಗೆ ಕಾಲು ಸಿಲುಕಿಕೊಂಡು ಆರ್ತತೆಯಿಂದ ಮೊರೆಯಿಟ್ಟ ಆನೆಗೆ ಮಹಾವಿಷ್ಣುವು ಅನುಗ್ರಹ ಮಾಡಿದನು. ಚಕ್ರದಿಂದ ಮೊಸಳೆಯನ್ನು ಸೀಳಿ ಆನೆಯನ್ನು ಕಾಪಾಡಿದನು.

* * *

೩೬

ರಾಗ : ಶುದ್ಧಸಾವೇರಿ ತಾಳ : ಆದಿ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಲಲಿತಾಂಬಿಕಾಂ ಚಿಂತಯಾಮ್ಯಹಂ
ಶ್ರೀ ಗುರುಗುಹ ಪೂಜಿತ ಪದಾಂಬುಜಂ (ಲಲಿತಾಂಬಿಕಾಂ)

ಅನುಪಲ್ಲವಿ : ತ್ರಿಲೋಕ ರಾಜ್ಞೀಂ ದೀನರಕ್ಷಕೀಂ
ತ್ರಿಕೋಣವಾಸಿನೀಂ ಭಂಡಮರ್ದಿನೀಂ (ಲಲಿತಾಂಬಿಕಾಂ)

ಚರಣ : ಕಲಾಮಾಲಿನೀಂ ಕಾತ್ಯಾಯಿನೀಂ
ಕಂಜಲೋಚನೀಂ ಕನಕಮಾಲಿನೀಂ
ಪಾಲಿತ ಮಂತ್ರಣ್ಯಾದಿ ಸ್ವರೂಪಾಂ
ಪಶುಪತಿ ಹೃದಾನಂದಕರ ಮೋಹಾಂ (ಲಲಿತಾಂಬಿಕಾಂ)

**ಪ್ರತಿಪದಾರ್ಥ :** ಶ್ರೀ ಗುರುಗುಹಪೂಜಿತ–ಗುರುಗುಹನಿಂದ ಪೂಜಿಸಲ್ಪಟ್ಟ ; ಪದಾಂಬುಜಾಂ–ಪಾದಕಮಲಗಳುಳ್ಳ ; ಲಲಿತಾಂಬಿಕಾಂ–ಲಲಿತಾಂಬಿಕೆಯನ್ನು ; ಚಿಂತಯಾಮ್ಯಹಂ–ನಾನು ಧ್ಯಾನಿಸುತ್ತೇನೆ. ತ್ರಿಲೋಕ ರಾಜ್ಞೀಂ–ಮೂರು ಲೋಕಗಳಿಗೂ ರಾಣಿಯಾದ ; ದೀನ ರಕ್ಷಕೀಂ–ದೀನರನ್ನು ರಕ್ಷಿಸುವ ; ತ್ರಿಕೋಣವಾಸಿನೀಂ–ಸತ್, ಚಿತ್, ಆನಂದ ಎಂಬ ತ್ರಿಕೋನದಲ್ಲಿ ವಾಸಿಸುವ ; ಭಂಡಮರ್ದಿನೀಂ–ಭಂಡಾಸುರನನ್ನು ಸಂಹರಿಸಿದ್ದ ಲಲಿತಾಂಬಿಕೆಯನ್ನು ಧ್ಯಾನಿಸುತ್ತೇನೆ. ಕಲಾಮಾಲಿನಿಯೂ, ಕಾತ್ಯಾಯನಿಯೂ ; ಕಂಜಲೋಚನೀಂ–ತಾವರೆಯಂತೆ ಕಣ್ಣುಳ್ಳವಳೂ ; ಕನಕಮಾಲಿನೀಂ–ಸುವರ್ಣಮಾಲಿಕೆ ಧರಿಸಿದವಳೂ ; ಪಾಲಿತ ಮಂತ್ರಣ್ಯಾದಿ ಸ್ವರೂಪಾಂ–ಸಕಲ ಮಂತ್ರಗಳ ಪಾಲಿಕೆಯಾದವಳೂ ; ಪಶುಪತಿ–ಈಶ್ವರನ ; ಹೃದಾನಂದಕರ ಮೋಹಾಂ–ಹೃದಯಕ್ಕೆ ಆನಂದವನ್ನು ಉಂಟುಮಾಡುವವಳೂ ಆದ ಲಲಿತಾಂಬಿಕೆಯನ್ನು ಚಿಂತಿಸುತ್ತೇನೆ.

* * *

೩೭

ರಾಗ : ಖರಹರಪ್ರಿಯ ತಾಳ : ಆದಿ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಸಂಕಲ್ಪಮೆಟ್ಟಿದೋ ಮನಸಾ ಸಾಕೇತನಿಲಯುಡೌ ರಾಮುನಿ (ಸಂಕಲ್ಪ)

ಅನುಪಲ್ಲವಿ : ಪಂಕೇರುಹಾಸನಾಸೀನುಡೈನ ಬ್ರಹ್ಮಕೈನ ದೆಲುಸುನೋ ತೆಲಿಯದೊ (ಸಂಕಲ್ಪ)

ಚರಣ : ಸರ್ವಜೀವ ಅಂತಃಕರಣಾಸೀನುಡೈ ಸರ್ವಕರ್ಮಮುಲಕು ಸಾಕ್ಷಿಯೈಯುಂಡಿ
ಸರ್ವಲೋಕ ನಿಯಾಮಕುಡೈ ವೆಲಯು ಸರ್ವೇಶುಡೈನ ವೆಂಕಟೇಶ್ವರುನಿ (ಸಂಕಲ್ಪ)

**ಪ್ರತಿಪದಾರ್ಥ :** ಸಾಕೇತ ನಿಲಯುಡೌ–ಸಾಕೇತಪುರದಲ್ಲಿ ನೆಲಸಿದ; ರಾಮುನಿ–ರಾಮನ; ಸಂಕಲ್ಪಮು ಎಟ್ಟಿದೋ–ಸಂಕಲ್ಪವು ಹೇಗಿದೆಯೋ; ಮನಸಾ–ಎಲೆ ಮನಸ್ಸೆ; ಅದು, ಪಂಕೇರುಹಾಸನಾಸೀನುಡೈನ–ತಾವರೆಯ ಆಸನದ ಮೇಲೆ ಕುಳಿತಿರುವ; ಬ್ರಹ್ಮಕೈನ–ಬ್ರಹ್ಮನಿಗಾದರೂ; ದೆ (ತೆ)ಲುಸುನೋ ತೆಲಿಯದೊ–ತಿಳಿದಿದೆಯೋ ಇಲ್ಲವೋ ಕಾಣೆ. ಸರ್ವಜೀವ ಅಂತಃಕರಣಾಸೀನುಡೈ–ಸರ್ವಜೀವಿಗಳ ಅಂತಃಕರಣದಲ್ಲಿ ನೆಲಸಿರುವ; ಸರ್ವಕರ್ಮಮುಲಕು ಸಾಕ್ಷಿಯೈಯುಂಡಿ–ಸಮಸ್ತ ಕರ್ಮಗಳಿಗೂ ಸಾಕ್ಷಿಯಾಗಿರುವ; ಸರ್ವಲೋಕ ನಿಯಾಮಕುಡೈ–ಸರ್ವಲೋಕಗಳನ್ನೂ ನಿಯಮಿಸಿ ನಿಯಂತ್ರಿಸುತ್ತಿರುವ ಸರ್ವೇಶುಡೈನ–ಸರ್ವೇಶ್ವರನಾದ; ವೆಂಕಟೇಶ್ವರುನಿ–ವೆಂಕಟೇಶ್ವರನ ಸಂಕಲ್ಪವು ಹೇಗಿದೆಯೋ ಕಾಣೆನಲ್ಲ!

**ತಾತ್ಪರ್ಯ :** ಶ್ರೀರಾಮಚಂದ್ರನ ಸಂಕಲ್ಪವು ಹೇಗಿದೆಯೋ ತಿಳಿಯದಲ್ಲ ಎನ್ನುತ್ತಾರೆ ಕವಿ. ಅದು ಬ್ರಹ್ಮನಿಗೂ ತಿಳಿದಿದೆಯೋ ಇಲ್ಲವೋ! ಅವನು ಸರ್ವ ಜೀವಿಗಳ ಅಂತಃಕರಣದಲ್ಲೂ ನೆಲಸಿದ್ದಾನೆ. ಸರ್ವಕರ್ಮಗಳಿಗೂ ಸಾಕ್ಷಿಯಾಗಿದ್ದಾನೆ. ಸಮಸ್ತ ಲೋಕಗಳನ್ನೂ ನಿಯಮಿಸಿ ನಿಯಂತ್ರಿಸುತ್ತಿದ್ದಾನೆ. ಸರ್ವೇಶ್ವರನಾದ ಆ ವೆಂಕಟೇಶ್ವರನ ಸಂಕಲ್ಪವೇ ಅಂತಿಮ. ಅದು ಹೇಗಿದೆಯೋ ಕಾಣೆನಲ್ಲಾ ಎಂದು ಆತಂಕಪಡುತ್ತಿದ್ದಾರೆ.

* * *

## ೩೮

**ರಾಗ : ಖರಹರಪ್ರಿಯ** **ತಾಳ : ಆದಿ** **ತ್ಯಾಗರಾಜರು**

ಪಲ್ಲವಿ : ವಿಡಮು ಸೇಯವೇ ನನ್ನು ವಿಡನಾಡಕುವೇ

ಅನುಪಲ್ಲವಿ : ಪುಡಮಿತನಯ ಜೇತಿ ಮಂಚಿ-ಮಡುಪುಲನುಚು ದಲಚಿ ತಲಚಿ (ವಿಡಮು)

ಚರಣ : ರಾಜಮಾನ್ಯುಡೌ ಸೌಮಿತ್ರಿ-ರತನ ತಮ್ಮಪಡಿಗ ಬಟ್ಟಿ
ತೇಜರಿಲ್ಲ ನಿಲಿಚಿನಾಡು ದೇವ ದೇವ
ಜಾಜಿ ಕಾಯಲು ಏಲಕುಲು–ಜಾಪತ್ರಿ ವಕ್ಕಲಾಕುಲು
ರಾಜರಾಜವರ ತ್ಯಾಗರಾಜು ಪ್ರೇಮತೋ ನೊಸಂಗೆ (ವಿಡಮು)

**ಪ್ರತಿಪದಾರ್ಥ :** ಶ್ರೀರಾಮಚಂದ್ರನೆ, ವಿಡಮು ಸೇಯವೆ–ತಾಂಬೂಲವನ್ನು ಸೇವಿಸು; ನನ್ನು–ನನ್ನನ್ನು; ವಿಡನಾಡಕುವೆ–ಕೈ ಬಿಡಬೇಡ; ಪುಡಮಿ ತನಯ–ಭೂ ಜಾತೆಯಾದ ಸೀತಾದೇವಿಯು; ಜೇತಿ–ತನ್ನ ಕೈಗಳಿಂದಲೇ; ಮಂಚಿ–ಚೆನ್ನಾಗಿ; ಮುಡುಪುಲನುಚು ದಲಚಿ ತಲಚಿ–ಮಡಿಸಿಕೊಟ್ಟದ್ದು ಎಂದು ನೆನೆದುಕೊಂಡು ತಾಂಬೂಲವನ್ನು ಸ್ವೀಕರಿಸು; ದೇವ ದೇವ, ರಾಜಮಾನ್ಯುಡೌ ಸೌಮಿತ್ರಿ–ರಾಜರಿಂದ ಮಾನ್ಯನಾದ ಲಕ್ಷ್ಮಣನು; ರತನಪು ತಮ್ಮಪಡಿಗ ಬಟ್ಟಿ–ರತ್ನಗಳಿಂದ ನಿರ್ಮಿಸಿದ ಉಗುಳು ಬಟ್ಟಲನ್ನು ಹಿಡಿದು; ತೇಜರಿಲ್ಲ ನಿಲಿಚಿನಾಡು–ಶೋಭಿಸುತ್ತಾ ನಿಂತಿದ್ದಾನೆ; ಜಾಜಿಕಾಯಲು–ಜಾಕಾಯಿ; ಏಲಕುಲು–ಏಲಕ್ಕಿ; ಜಾಪತ್ರಿ–ಜಾಯಿಪತ್ರೆ; ವಕ್ಕಲು ಆಕುಲು–ವೀಳ್ಯದೆಲೆ ಅಡಕೆಗಳನ್ನು; ರಾಜರಾಜ ವರ ತ್ಯಾಗರಾಜ–ತ್ಯಾಗರಾಜನು; ಪ್ರೇಮತೋನು–ಪ್ರೀತಿಯಿಂದ; ಒಸಂಗೆ–ಅರ್ಪಿಸುತ್ತಿದ್ದಾನೆ, ದಯವಿಟ್ಟು ಸೇವಿಸು.

**ತಾತ್ಪರ್ಯ :** ಸುಂದರವಾದೊಂದು ಚಿತ್ರವನ್ನು ತ್ಯಾಗರಾಜರು ಇಲ್ಲಿ ಕೊಟ್ಟಿದ್ದಾರೆ. ಶ್ರೀರಾಮಚಂದ್ರನು ಕುಳಿತಿದ್ದಾನೆ. ಸೀತಾದೇವಿಯು ತನ್ನ ಸ್ವಹಸ್ತದಿಂದ ತಾಂಬೂಲವನ್ನು ಮಡಿಸಿಕೊಡುತ್ತಿದ್ದಾಳೆ. ತಮ್ಮ ಲಕ್ಷ್ಮಣನು ರತ್ನ ಖಚಿತವಾದ ಬಟ್ಟಲನ್ನು ಹಿಡಿದು ನಿಂತಿದ್ದಾನೆ.—ಹಾಗೆಂದು ನೆನೆದುಕೆಳ್ಳುತ್ತಾ ನಾನು ಅರ್ಪಿಸುತ್ತಿರುವ ಈ ತಾಂಬೂಲವನ್ನು ಸೇವಿಸು ಎಂದು ಶ್ರೀರಾಮನನ್ನು ಕೇಳಿಕೊಳ್ಳುತ್ತಾರೆ. ಒಳ್ಳೆಯ ಜಾಕಾಯಿ, ಜಾಪತ್ರಿ, ಏಲಕ್ಕಿ, ಅಡಿಕೆ, ಎಲೆ ಇವುಗಳನ್ನು ಪ್ರೀತಿಯಿಂದ ಅರ್ಪಿಸುತ್ತಿದ್ದೇನೆ. ದಯವಿಟ್ಟು ಪ್ರೀತಿಯಿಂದ ಸ್ವೀಕರಿಸು, ನನ್ನ ಕೈಬಿಡಬೇಡ ಎಂದು ಕೇಳಿಕೊಳ್ಳುತ್ತಿದ್ದಾರೆ. ವರ್ಣಚಿತ್ರಕ್ಕೆ ಒಂದು ಸುಂದರ ಸಾಮಗ್ರಿ ಈ ಕೃತಿಯಲ್ಲಿದೆ.

* * *

೩೯

**ರಾಗ : ಖರಹರಪ್ರಿಯ** **ತಾಳ : ಆದಿ** **ತ್ಯಾಗರಾಜರು**

ಪಲ್ಲವಿ : ರಾಮ ನೀಯೆಡ ಪ್ರೇಮ ರಹಿತುಲಕು
ನಾಮರುಚಿ ದೆಲುಸುನಾ ? ಓ ಸೀತಾ– (ರಾಮ)

ಅನುಪಲ್ಲವಿ : ಕಾಮಿನಿ ವೇಷಧಾರಿಕಿ ಸಾಧ್ವೀ ನಡತ
ಲೇನ್ಯೈನ ದೆಲುಸುನಾ ಯಾರೀತಿ ಸೀತಾ– (ರಾಮ)

ಚರಣ : ತನಸೌಖ್ಯಮು ತಾನೆರುಗಕ ಯೊರುಲಕು
ತಗು ಬೋಧನ ಸುಖಮಾ ?
ಘನಮುಗು ಪುಲಿ ಗೋರೂಪಮ್ಯೈನ
ತ್ಯಾಗರಾಜನುತ ಶಿಶುವು ಪಾಲು ಗಲ್ಗುನ ? (ರಾಮ)

**ಪ್ರತಿಪದಾರ್ಥ :** ಶ್ರೀರಾಮಚಂದ್ರ, ನೀಯೆಡ–ನಿನ್ನ ವಿಷಯದಲ್ಲಿ ; ಪ್ರೇಮರಹಿತುಲಕು–ವಿಶ್ವಾಸವಿಲ್ಲದವರಿಗೆ ನಾಮರುಚಿ–ನಿನ್ನ ನಾಮ ಸಂಕೀರ್ತನೆಯ ರುಚಿಯು ; ತೆಲುಸುನಾ–ತಿಳಿಯುತ್ತದೆಯೆ ? ಕಾಮಿನಿ ವೇಷಧಾರಿಕಿ–ಕೇವಲ ಹೆಂಗಸಿನ ವೇಷ ಧರಿಸಿದವನಿಗೆ ; ಸಾಧ್ವಿ ನಡತಲು–ಪತಿವ್ರತಾ ನಡವಳಿಕೆಯು ; ಏನ್ಯೈನ ತೆಲುಸುನಾ–ಸ್ವಲ್ಪವಾದರೂ ತಿಳಿಯುತ್ತದೆಯೆ ; ಯಾ ರೀತಿ–ಆ ರೀತಿಯಲ್ಲಿ ನಿನ್ನ ನಾಮರುಚಿಯು ನಿನ್ನಲ್ಲಿ ವಿಶ್ವಾಸವಿಲ್ಲದವರಿಗೆ ಹೇಗೆ ತಿಳಿದೀತು ? ಘನಮುಗು–ಘನವಾದ ; ಪುಲಿ–ಹುಲಿಯು ; ಗೋರೂಪಮ್ಯೈನ–ಹಸುವಿನ ರೂಪ ಧರಿಸಿದರೆ ; ಶಿಶುವು–ಮಗುವಿಗೆ ; ಪಾಲು ಗಲ್ಗುನಾ–ಅದರಿಂದ ಹಾಲು ದೊರಕುತ್ತದೆಯೆ ? ಹಾಗೆ, ತನ ಸೌಖ್ಯಮು ತಾನೆರುಗಕ–ಆತ್ಮ ಸುಖವನ್ನು ತಾನೇ ಅರಿಯದವನು ; ಯೊರುಲಕು–ಇತರರಿಗೆ ; ತಗು ಬೋಧನ–ಉಪದೇಶ ಮಾಡುವುದು ; ಸುಖಮಾ–ಸರಿಯೆ, ಯುಕ್ತವೆ ? (ತಾನೇ ಅರಿಯದವನು ಉಪದೇಶ ಮಾಡಿ ಇತರರಿಗೆ ಬೋಧಿಸಿ ಅರಿವು ಮಾಡಿಕೊಡುವುದು ಸಾಧ್ಯವೆ ?)

**ತಾತ್ಪರ್ಯ :** ಶ್ರೀರಾಮಚಂದ್ರ, ನಿನ್ನನ್ನು ಕುರಿತು ಪ್ರೇಮವಿಲ್ಲದವರಿಗೆ ನಿನ್ನ ನಾಮಸಂಕೀರ್ತನೆಯ ರುಚಿ ತಿಳಿಯುತ್ತದೆಯೆ ? ಕೆಲವು ಹೋಲಿಕೆಗಳನ್ನು ಕೊಟ್ಟು ಕವಿಯು ಈ ಮಾತನ್ನು ಸ್ಪಷ್ಟಪಡಿಸುತ್ತಾರೆ. ಕೇವಲ ಹೆಂಗಸಿನ ವೇಷ ಧರಿಸಿದ ಮಾತ್ರದಿಂದ ಪತಿವ್ರತಾ ನಡವಳಿಕೆ ಗೊತ್ತಾಗಿಬಿಡುತ್ತದೆಯೆ ? ಹಸುವಿನ ರೂಪ ಧರಿಸಿದ ಮಾತ್ರಕ್ಕೇ ಹುಲಿಯಿಂದ ಹಸುವಿನ ಹಾಲು ದೊರೆಯುತ್ತದೆಯೆ ? ತಾನೇ ಅರಿಯದವನು ಅದನ್ನು ಇತರರಿಗೆ ಅರಿವು ಮಾಡಿಕೊಡಬಲ್ಲನೆ ?

* * *

೪೦

ರಾಗ : ಮಾಯಾಮಾಳವಗೌಳ ತಾಳ : ಆದಿ ತ್ಯಾಗರಾಜರು

ಪಲ್ಲವಿ : ವಿದುಲಕು ಮ್ರೊಕ್ಕೆದ ಸಂಗೀತ ಕೋ– (ವಿದುಲಕು)

ಅನುಪಲ್ಲವಿ : ಮುದಮುನ ಶಂಕರಕೃತ ಸಾಮ ನಿಗಮ
ವಿದುಲಕು ನಾದಾತ್ಮಕ ಸಪ್ತಸ್ವರ (ವಿದುಲಕು)

ಚರಣ : ಕಮಲಾ–ಗೌರೀ–ವಾಗೀಶ್ವರೀ–ವಿಧಿ–ಗರುಡಧ್ವಜ–ಶಿವ–ನಾರದುಲು
ಅಮರೇಶ–ಭರತ–ಕಾಶ್ಯಪ–ಚಂಡೀಶ–ಆಂಜನೇಯ–ಗುಹ–ಗಜಮುಖುಲು
ಸುಮೃಕಂಡುಜ–ಕುಂಭಜ–ತುಂಬುರು–ವರಸೋಮೇಶ್ವರ–ಶಾರ್ಙ್ಗದೇವ–ನಂದೀ
ಪ್ರಮುಖುಲಗು ತ್ಯಾಗರಾಜ ವಂದ್ಯುಲಕು ಬ್ರಹ್ಮಾನಂದ–ಸುಖಾಂಬುಧಿ ಮರ್ಮ (ವಿದುಲಕು)

**ಪ್ರತಿಪದಾರ್ಥ** : ಸಂಗೀತ ಕೋವಿದುಲಕು–ಸಂಗೀತ ವಿದ್ವಾಂಸರಿಗೆ; ಮ್ರೊಕ್ಕೆದ(ನ್)–ನಮಸ್ಕರಿಸುತ್ತೇನೆ; ಮುದಮುನ–ಸಂತೋಷದಿಂದ; ಶಂಕರಕೃತ–ಶಿವನಿಂದ ರಚಿತವಾದ; ಸಾಮ ನಿಗಮ ವಿದುಲಕು–ಸಾಮವೇದ ವಿದ್ವಾಂಸರಿಗೆ; ನಾದಾತ್ಮಕ–ನಾದದಿಂದ ಕೂಡಿದ; ಸಪ್ತಸ್ವರವಿದುಲಕು–ಏಳು ಸ್ವರಗಳನ್ನೂ ಚೆನ್ನಾಗಿ ಬಲ್ಲವರಿಗೆ; ಮ್ರೊಕ್ಕೆದ(ನ್)–ನಮಸ್ಕರಿಸುತ್ತೇನೆ; ಕಮಲಾ–ಲಕ್ಷ್ಮಿ; ಗೌರಿ; ವಾಗೀಶ್ವರಿ–ಸರಸ್ವತಿ; ವಿಧಿ–ಬ್ರಹ್ಮ; ಗರುಡಧ್ವಜ–ವಿಷ್ಣು; ಶಿವ; ನಾರದ; ಅಮರೇಶ–ಇಂದ್ರ; ಭರತ; ಕಾಶ್ಯಪ; ಚಂಡೀಶ; ಆಂಜನೇಯ; ಗುಹ–ಷಣ್ಮುಖ; ಗಜಮುಖುಲು–ಗಣಪತಿ; ಸುಮೃಕಂಡುಜ–ಶ್ರೇಷ್ಠನಾದ ಮಾರ್ಕಂಡೇಯ; ಕುಂಭಜ–ಅಗಸ್ತ್ಯ; ತುಂಬುರು; ವರ–ಶ್ರೇಷ್ಠನಾದ; ಸೋಮೇಶ್ವರ; ಶಾರ್ಙ್ಗದೇವ–ಸಂಗೀತ ರತ್ನಾಕರದ ಕರ್ತೃ ಶಾರ್ಙ್ಗದೇವ; ನಂದಿ; ಪ್ರಮುಖುಲಕು–ಮುಂತಾದ ಮುಖ್ಯ ಕೋವಿದರಿಗೆ; ತ್ಯಾಗರಾಜ ವಂದ್ಯುಲಕು–ತ್ಯಾಗರಾಜನಿಂದ ನಮಸ್ಕರಿಸಲ್ಪಟ್ಟವರಿಗೆ; ಬ್ರಹ್ಮಾನಂದ ಸುಖಾಂಬುಧಿ ಮರ್ಮ ವಿದುಲಕು–ಬ್ರಹ್ಮಾನಂದ ಸುಖಸಾಗರದ ರಹಸ್ಯವನ್ನು ಅರಿತ ವಿದ್ವಾಂಸರಿಗೆ ನಮಸ್ಕರಿಸುತ್ತೇನೆ.

* * *

೪೧

ರಾಗ : ಮಾಯಾಮಾಳವಗೌಳ ತಾಳ : ರೂಪಕ ಸ್ವಾತಿ ತಿರುನಾಳ್ ಮಹಾರಾಜರು

ಪಲ್ಲವಿ : ದೇವದೇವ ಕಲಯಾಮಿ ತೇ
ಚರಣಾಂಬುಜ ಸೇವನಂ (ದೇವ)

ಅನುಪಲ್ಲವಿ : ಭುವನತ್ರಯ ನಾಯಕ
ಭೂರಿ ಕರುಣಯಾ ಮಮ
ಭವತಾಪಮಖಿಲಂ
ವಾರಯ ರಮಾಕಾಂತ (ದೇವ)

ಚರಣ : ಜಾತರೂಪ ನಿಭಚೇಲ
ಜನ್ಮಾರ್ಜಿತ ಮಮಾಖಿಲ
ಪಾತಕ ಭಯಹರಾಮಿಹ
ತಾರಯ ಕರುಣಯಾ
ದಿತಿಜಾಳಿ ವಿದಹನ ದೀನಬಂಧು ಮಾಮವ
ಶ್ರಿತ ವಿಬುಧಪಾಲ ಶ್ರೀ ಪದ್ಮನಾಭ ಶೌರೇ (ದೇವ)

**ಪ್ರತಿಪದಾರ್ಥ :** ದೇವದೇವ–ಎಲೈ ದೇವನೆ; ತೇ–ನಿನ್ನ; ಚರಣಾಂಬುಜ ಸೇವನಂ–ಪಾದ ಕಮಲಗಳ ಸೇವೆಯನ್ನು; ಕಲಯಾಮಿ–ನಮಸ್ಕರಿಸುತ್ತೇನೆ; (ನಿನ್ನ ಪಾದಗಳನ್ನು ಸೇವಿಸುವ ಕ್ರಿಯೆಯೇ ಪರಮ ಪವಿತ್ರ, ಅದಕ್ಕೆ ನನ್ನ ನಮಸ್ಕಾರ ಎಂದು ಭಾವ.) ಭುವನತ್ರಯ ನಾಯಕ–ಮೂರುಲೋಕಗಳಿಗೂ ನಾಯಕನಾದವನೆ; ರಮಾಕಾಂತ–ಲಕ್ಷ್ಮೀಪತಿಯೆ; ಭೂರಿ ಕರುಣಯಾ–ಅಪಾರವಾದ ಕರುಣೆಯಿಂದ; ಮಮ–ನನ್ನ; ಭವತಾಪಮಖಿಲಂ–ಈ ಸಂಸಾರದ ಬೇಗೆಯೆಲ್ಲವನ್ನೂ; ವಾರಯ–ಪರಿಹರಿಸು; ಜಾತರೂಪ ನಿಭ–ಚಿನ್ನವನ್ನು ಹೋಲುವ; ಚೇಲ–ವಸ್ತ್ರವನ್ನು ಧರಿಸಿದವನೆ (ಪೀತಾಂಬರ ಧಾರಿಯೆ); ಕರುಣಯಾ–ಕರುಣೆಯಿಂದ; ಮಮ–ನನ್ನ; ಜನ್ಮಾರ್ಜಿತ–ಜನ್ಮಾಂತರಗಳಿಂದ ಸಂಪಾದಿಸಿರುವ; ಅಖಿಲ ಪಾತಕ ಭಯಹರಾ–ಸಮಸ್ತ ಪಾಪಗಳ ಭಯಗಳನ್ನು ಪರಿಹರಿಸಿ; ಇಹ ತಾರಯ–ಇಲ್ಲಿ ಬಿಡುಗಡೆ ಮಾಡು; ದಿತಿಜಾಳಿ–ದೈತ್ಯರ (ದಿತಿಯ ಮಕ್ಕಳಾದ ರಾಕ್ಷಸರು) ಸಮೂಹವನ್ನು; ವಿದಹನ–ಸುಟ್ಟವನೆ; ದೀನ ಬಂಧುವೆ; ಶ್ರಿತ ವಿಬುಧ ಪಾಲ–ಆಶ್ರಯಕ್ಕೆ ಬಂದ ವಿದ್ವಾಂಸರನ್ನು ಪಾಲಿಸುವವನೆ; ಶ್ರೀ ಪದ್ಮನಾಭನೆ, ಶೌರಿಯೆ, ಮಾಮವ–ನನ್ನನ್ನು ಕಾಪಾಡು.

* * *

೪೨

ರಾಗ : ಮಾಯಾಮಾಳವಗೌಳ ತಾಳ : ರೂಪಕ ತಂಜಾವೂರು ಪೊನ್ನಯ್ಯ

ಪಲ್ಲವಿ : ಮಾಯಾತೀತ ಸ್ವರೂಪಿಣಿ ನನ್ನು ಬ್ರೋವವೇ
ಮಹಾ ತ್ರಿಪುರಸುಂದರಿ ಶಂಕರಿ (ಮಾಯಾತೀತ)

ಅನುಪಲ್ಲವಿ : ಮಾಯಾಮಾಳವಗೌಳ ದೇಶಮುನ ಮಹಿಮಗಲ ದೊರಲರ್ಚಿಂಚು ಈಶ್ವರಿ

ಕಾಯಜುನಿ ವೈರಿಕಿ ಪ್ರಾಣ ಕಾಂತಾ ಬೃಹದೀಶ್ವರಿ ಕೃಪ
ಸೇಯವಲೆನಮ್ಮಾ ಗುರುಗುಹಸ್ವಾಮಿಕಿ ನೇ ದಾಸುಡೈತಿ (ಮಾಯಾತೀತ)

**ಪ್ರತಿಪದಾರ್ಥ :** ಮಾಯಾತೀತ ಸ್ವರೂಪಿಣಿ–ಮಾಯೆಗೆ ಸಿಲುಕದ ಸ್ವರೂಪವುಳ್ಳ; ಮಹಾತ್ರಿಪುರಸುಂದರಿಯಾದ; ಶಂಕರಿ–ಶುಭಕರಳಾದ ದೇವಿ; ನನ್ನು–ನನ್ನನ್ನು; ಬ್ರೋವವೇ–ಕಾಪಾಡಮ್ಮ; ಮಾಳವ ಗೌಳ ಮೊದಲಾದ ದೇಶಮುನ–ದೇಶದಲ್ಲಿ ಇರುವ; ಮಹಿಮಗಲ–ಮಹಿಮಾವಂತರಾದ; ದೊರಲು ಅರ್ಚಿಂಚು ಈಶ್ವರಿ–ದೊರೆಗಳು ಪೂಜಿಸುವ ಈಶ್ವರಿಯೆ ನನ್ನನ್ನು ಕಾಪಾಡು [ಇಲ್ಲಿ ಚಮತ್ಕಾರದಿಂದ ಮಾಯಾಮಾಳವಗೌಳ ಎಂಬ ರಾಗಮುದ್ರೆಯನ್ನು ಅಳವಡಿಸಲಾಗಿದೆ.] ಕಾಯಜುನಿ ವೈರಿಕಿ–ಮನ್ಮಥನ ವಿರೋಧಿಯಾದ ಪರಮೇಶ್ವರನಿಗೆ; ಪ್ರಾಣಕಾಂತಾ–ವಲ್ಲಭೆ (ಪತ್ನಿ) ಯಾದವಳೇ; ಬೃಹದೀಶ್ವರಿ; ಕೃಪ ಸೇಯವಲೆನಮ್ಮ–ಕೃಪೆ ಮಾಡಬೇಕಮ್ಮ; ನೇ ಗುರುಗುಹಸ್ವಾಮಿಕಿ ದಾಸುಡೈತಿ–ನಾನು ಗುರುಗುಹ ಸ್ವಾಮಿಗೆ ದಾಸನಾಗಿದ್ದೇನೆ [ತಮ್ಮ ಗುರುವಾದ ಮುದ್ದುಸ್ವಾಮಿ ದೀಕ್ಷಿತರ ದಾಸ ತಾನು ಎಂದು ಸೂಚಿಸಿ ಆಚಾರ್ಯ ಮುದ್ರೆಯನ್ನು ಅಳವಡಿಸಿದ್ದಾರೆ]

* * *

೪೩

**ರಾಗ : ಮಧ್ಯಮಾವತಿ** **ತಾಳ : ಆದಿ** **ತ್ಯಾಗರಾಜರು**

ಪಲ್ಲವಿ : ವಿನಾಯಕುನಿ ವಲೆನು ಬ್ರೋವವೇ ನಿನು
ವಿನಾ ವೆಲ್ಪುಲೆವರಮ್ಮ (ವಿನಾಯಕುನಿ)

ಅನುಪಲ್ಲವಿ : ಅನಾಥರಕ್ಷಕಿ ಶ್ರೀ ಕಾಮಾಕ್ಷಿ ಸುಜನಾಘವೋಚನಿ ಶಂಕರಿ ಜನನಿ (ವಿನಾಯಕುನಿ)

ಚರಣ : 1 ನರಾಧಮುಲಕುನು ವರಾನೊಸಗನುಂ
ಡ ರಾಮುಲ್ಶೈ ಭೂಸುರಾದಿ ದೇವತು
ಲು ರಾಯಡಿನಿ ಜೆಂದರಾದು ; ದಯಜೂ
ಡ ರಾದ ಕಂಚಿಪುರಾಧಿನಾಯಕಿ (ವಿನಾಯಕುನಿ)

2 ಪಿತಾಮಹುಡು ಜನಹಿತಾರ್ಥವ್ಮೈ ನಿ-
ನ್ನು ತಾ ತೆಲಿಯವೇಡ ತಾಳಿಮಿಗಲ ಯ
ವತಾರವೆತ್ತಿ ; ಯಿಕನು ತಾಮಸಮು ಸೇ-
ಯ ತಾಳಜಾಲಮು ; ನತಾರ್ತಿಹಾರಿಣಿ (ವಿನಾಯಕುನಿ)

3 ಪುರಾಣಿ ದಯಚೇ ಗಿರಾಲು ಮಾಕುನಿ-
ಕಿ ರಾಜೇಸಿ ಬ್ರೋಚು ರಾಜಧರಿ ತ್ಯಾ-
ಗರಾಜುನಿ ಹೃದಯ ಸರೋಜ ವೇಲ್ಶೈ-
ನ ಸೋದರಿ ಪರಾಶಕ್ತಿ ನನು (ವಿನಾಯಕುನಿ)

**ಪ್ರತಿಪದಾರ್ಥ :** ವಿನಾಯಕುನಿವಲೆನು–ವಿನಾಯಕನಂತೆಯೇ ; ಬ್ರೋವವೇ–ಕಾಪಾಡಮ್ಮ ; ನಿನುವಿನಾ–ನೀನಲ್ಲದೆ ; ವೆಲ್ಪುಲು ಎವರಮ್ಮ–ರಕ್ಷಿಸುವವರು ಯಾರಮ್ಮ ? ಅನಾಥರನ್ನು ರಕ್ಷಿಸುವವಳೆ, ಶ್ರೀ ಕಾಮಾಕ್ಷಿ, ಸುಜನಾಘ ವೋಚನಿ–ಸಜ್ಜನರ ಪಾಪಗಳನ್ನು ಪರಿಹರಿಸುವವಳೆ ; ಶಂಕರಿಯೆ, ತಾಯೆ, ನನ್ನನ್ನು ಕಾಪಾಡು. ನರಾಧಮುಲಕುನು–ಅಧಮರಾದ ಮನುಷ್ಯರಿಗೂ ; ವರಾನೊಸಗನುಂಡ–ಅನುಗ್ರಹ ಮಾಡುವ ; ರಾಮುಲ್ಶೈ–ಅಭಿರಾಮಿಯೆ ; ಭೂಸುರಾದಿ ದೇವತುಲು–ಬ್ರಾಹ್ಮಣರೇ ಮೊದಲಾದ ಸಜ್ಜನರು ; ರಾಯಡಿನಿ ಜೆಂದರಾದು–ಕಷ್ಟಪಡಬೇಕಾಗಿಲ್ಲ ; ದಯಜೂಡರಾದ–ದಯೆಯಿಂದ ನೋಡಬಾರದೆ ; ಕಂಚೀಪುರದಲ್ಲಿ 'ನೆಲಸಿರುವ ಕಾಮಾಕ್ಷಿಯೆ ನನ್ನನ್ನು ಕಾಪಾಡು ; ಪಿತಾಮಹುಡು–ಬ್ರಹ್ಮನು ; ಜನಹಿತಾರ್ಥವ್ಮೈ–ಜನಹಿತಾರ್ಥವಾಗಿ ; ನಿನ್ನು–ನಿನ್ನನ್ನು ; ತಾ–ತಾನು ; ತೆಲಿಯವೇಡ–ಅರ್ಥ ಮಾಡಿ ಕೊಳ್ಳಲಿ ಎಂಬುದಕ್ಕಾಗಿ ತಾಳಿಮಿಗಲ–ಅಪಾರ ಸಹನೆಯಿಂದ ; ಅವತಾರವೆತ್ತಿ–ಸಾತ್ವಿಕವಾದ ಅವತಾರಗಳನ್ನು ಧರಿಸಿದ ದೇವಿ ನೀನು ; ಇಕನು–ಇನ್ನು ; ತಾಮಸಮು ಸೇಯ–ತಾಮಸ ಮಾಡಬೇಡ ; ತಾಳಜಾಲಮು–ತಡೆಯಲು ಸಾಧ್ಯವಿಲ್ಲ ; ನತಾರ್ತಿಹಾರಿಣಿ–ಭಕ್ತರ ಸಂಕಟಗಳನ್ನು ಹೋಗಲಾಡಿಸುವವಳೆ, ನನ್ನನ್ನು ಕಾಪಾಡು. ಪುರಾಣಿ–ಪ್ರಾಚೀನವಾದವಳೆ ; ದಯಚೇ–ದಯೆಯಿಂದ ; ರಾಜೇಸಿ–ಬಂದು ; ಬ್ರೋಚು–ಕಾಪಾಡು ; ರಾಜಧರೀ–ಚಂದ್ರನನ್ನು ಧರಿಸಿದವಳೇ ; ತ್ಯಾಗ ರಾಜುನಿ–ತ್ಯಾಗರಾಜನ ; ಹೃದಯ ಸರೋಜ ವೇಲ್ಶೈನ–ಹೃದಯಕಮಲದ ಮೇಲೆ ಕುಳಿತಿರುವ ; ಸೋದರಿ ಪರಾಶಕ್ತಿ–ಪರಾಶಕ್ತಿ ಸ್ವರೂಪಿಣಿಯೇ ; ನನ್ನು–ನನ್ನನು ಕಾಪಾಡು.

* * *

೪೪

ರಾಗ : ಮಧ್ಯಮಾವತಿ     ತಾಳ : ರೂಪಕ     ತ್ಯಾಗರಾಜರು

ಪಲ್ಲವಿ : ಅಲಕಲಲ್ಲಾಡಗಗನಿಯಾರಾಣ್ಮುನಿ ಎಟು ಪೊಂಗೆನೊ (ಅಲಕ)

ಅನುಪಲ್ಲವಿ : ಚೆಲುವು ಮಿಾರಗನು ಮಾರೀಚುನಿ ಮದ ಮಣಚುವೇಳ (ಅಲಕ)

ಚರಣ : ಮುನಿ ಕನು ಸೈಗ ದೆಲಿಸಿ ಶಿವಧನುವುನು ವಿರಿಚೇಡಿ ಸಮಯ–
ಮುನ ತ್ಯಾಗರಾಜ ವಿನುತುನಿ ಮೋಮುನ ರಾಜಿಲ್ಲು (ಅಲಕ)

**ಪ್ರತಿಪದಾರ್ಥ :** ಅಲಕಲು–ಮುಂಗುರುಳು ; ಅಲ್ಲಾಡಗ–ಅಲುಗಾಡುತ್ತಿರಲು ; ಗನಿ–ಅದನ್ನು ಕಂಡು ; ಆರಾಣ್ಮುನಿ–ರಾಜರ್ಷಿಯಾದ ವಿಶ್ವಾಮಿತ್ರನು ; ಎಟು ಪೊಂಗೆನೊ–ಎಷ್ಟು ಸಂತೋಷಪಟ್ಟನೋ ; ಚೆಲುವು ಮಿಾರಗನು–ಸೌಂದರ್ಯವು ಹೆಚ್ಚಾಗುತ್ತಿರಲು ; ಮಾರೀಚುನಿ–ಮಾರೀಚನ ; ಮದಮಣಚು ವೇಳ–ಮದ (ಗರ್ವ) ವನ್ನು ಅಡಗಿಸುವ ಸಂದರ್ಭದಲ್ಲಿ ; ಮುನಿ ಕನುಸೈಗ ತೆಲಿಸಿ–ಮುನಿಯ ಕಣ್ಸನ್ನೆಯನ್ನು ತಿಳಿದು ; ಶಿವಧನುವುನು–ಶಿವಧನುಸ್ಸನ್ನು ; ವಿರಿಚೇ ಸಮಯಮುನ–ಮುರಿದು ಹಾಕುವ ಸಂದರ್ಭದಲ್ಲಿ ; ತ್ಯಾಗರಾಜ ವಿನುತುನಿ ಮೋಮುನ–ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರನ ಮುಖದಲ್ಲಿ ; ರಾಜಿಲ್ಲು–ಶೋಭಿಸುತ್ತಿರುವ ಮುಂಗುರುಳು ಅಲುಗುತ್ತಿರಲು ನೋಡಿ ಮುನಿಯು ಎಷ್ಟು ಸಂತೋಷಗೊಂಡನೋ !

**ತಾತ್ಪರ್ಯ :** ರಾಜರ್ಷಿಯಾದ ವಿಶ್ವಾಮಿತ್ರನು ಶ್ರೀರಾಮನ ಮುಂಗುರುಳುಗಳು ಅಲುಗಾಡುವುದನ್ನು ನೋಡಿ ಎಷ್ಟು ಸಂತೋಷಪಟ್ಟನೋ ! ಅಧಿಕಾಧಿಕ ಸೌಂದರ್ಯದಿಂದೆ, ಮಾರೀಚನ ಗರ್ವವನ್ನು ಮುರಿದ ಸಮಯದಲ್ಲಿ, ಮತ್ತು ಮುನಿಯ ಕಣ್ಸನ್ನೆಯಂತೆ ಶಿವಧನುಸ್ಸನ್ನು ಬಗ್ಗಿಸಿ ಮುರಿದುಹಾಕಿದ ಸಂದರ್ಭದಲ್ಲಿ, ರಾಮನ ಹಣೆಯ ಮೇಲೆ ಶೋಭಿಸುತ್ತಿದ್ದ ಮುಂಗುರುಳುಗಳನ್ನು ನೋಡಿ ಆ ರಾಜರ್ಷಿ ಮುನಿ ಎಷ್ಟು ಸಂತೋಷಪಟ್ಟನೋ ! ಎಂದು ತಮ್ಮ ಆರಾಧ್ಯಮೂರ್ತಿ ಶ್ರೀರಾಮಚಂದ್ರನ ದಿವ್ಯಮಂಗಳ ರೂಪವನ್ನು ಕಲ್ಪಿಸಿಕೊಳ್ಳುತ್ತಾರೆ ತ್ಯಾಗರಾಜರು.

* * *

೪೫

ರಾಗ : ಮಧ್ಯಮಾವತಿ ತಾಳ : ಆದಿ

ಪಾಪನಾಶಂ ಶಿವನ್

ಪಲ್ಲವಿ : ಕರ್ಪಗವೇ ಕಣ್ ಪಾರಾಯ್
ಕರ್ಪಗವೇ ಕರುಣೈ ಕಣ್ ಪಾರಾಯ್

ಅನುಪಲ್ಲವಿ : ಚಿತ್ಪರಯೋಗಿಯರ್ ಸಿದ್ಧರ್ಕಳ್ ಜ್ಞಾನಿಯರ್
ತಿರುವುಡೈಯಡಿಯವರ್ಕರುವರಂ ಉದವುಂ
ತಿರುಮಗಳುಂ ಕಲೈಮಗಳುಂ ಪರವುಂ ತಿರುಮಯಿಲೇ (ಕರ್ಪಗವೇ)

ಚರಣ : ಸತ್ತು ಚಿದಾನಂದಮುದಾ ಸಕಲ ಉಯಿರ್ ಕುಯಿರಾಯವಳ್ ನೀ
ತತ್ತುವಮಸ್ಯಾದಿ ಮಹಾವಾಕ್ಕಿಯಂ ತತ್ ಪರವಸ್ತುವುಂ ನೀ
ಸತ್ತ್ವ ಗುಣವೋಡು ಭಕ್ತಿಶೈ ಬವರ್
ಭವರ್ ಪಾಪಮುಂ ತಾಪಮುಂ ಅಱ ಇನ್ಮೈಯಿಲ್ ವರ
ಸಂತಾನ ಸೌಭಾಗ್ಯ ಸಂಪತ್ತೋಡು ವರಂ ಅರುಳ್ ನಿರತಿಶಯ
ಇನ್ಬಮುಂ ತರುಂ (ಕರ್ಪಗವೇ)

**ಪ್ರತಿಪದಾರ್ಥ :** ಕರ್ಪಗವೇ–ಕಲ್ಪವೃಕ್ಷವೇ (ಇಲ್ಲಿ ದೇವಿ ಪಾರ್ವತಿಯನ್ನು ಕೇಳಿದ್ದು ಕೊಡುವ ಕಲ್ಪವೃಕ್ಷವೆಂದು ಕಲ್ಪಿಸಿದೆ) ; ಕಣ್ ಪರಾಯ್–ಕಡೆಗಣ್ಣು ನೋಟದಿಂದ ನೋಡು ; ಕರುಣೈ ಕಣ್ ಪಾರಾಯ್–ಕರುಣೆಯೆಂಬ ಕಡೆಗಣ್ಣಿನಿಂದ ನೋಡು ; ಚಿತ್‌ಪರಯೋಗಿಯರ್–ಚಿತ್ (ಜ್ಞಾನ) ಆನಂದದಲ್ಲಿ ಮುಳುಗಿದ ಯೋಗಿಗಳು ; ಸಿದ್ಧರ್ಕಳ್–ಸಿದ್ಧರು ; ಜ್ಞಾನಿಯರ್–ಜ್ಞಾನಿಗಳು ; ತಿರುವುಡೈ ಅಡಿಯವರಕ್–ಶ್ರೇಷ್ಠರಾದ ವಿರಕ್ತರು (ವಿರಕ್ತರು ಧರಿಸುವ ವಸ್ತ್ರ ತಿರುವುಡೆ) ಮುಂತಾದವರಿಗೆ ; ಅರುವರಂ–ಶ್ರೇಷ್ಠವಾದ ವರಗಳನ್ನು ; ಉದವುಂ–ನೀಡುವ ; ತಿರುಮಗಳುಂ–ಲಕ್ಷ್ಮಿಯೂ ; ಕಲೈಮಗಳುಂ–ಸರಸ್ವತಿಯೂ ; ಪರವುಂ–ಪೂಜಿಸುವ ; ತಿರುಮಯಿಲೇ– ಶ್ರೇಷ್ಠಳಾದವಳೇ, ದೇವಿಯೆ (ಪಕ್ಷಿಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು ನವಿಲು. ಆದ್ದರಿಂದ ಅದನ್ನು ಸಿಂಹ, ವೃಹಭ ಎಂಬುವುಗಳಂತೆಯೇ ಶ್ರೇಷ್ಠತ್ವ ಸೂಚಕವಾಗಿ ಬಳಸಿದೆ) ಕಲ್ಪವೃಕ್ಷವೇ ನನ್ನನ್ನು ನೋಡು ; ಸತ್ತು ಚಿದಾನಂದ ಅಮುದಾ–ಸತ್ ಚಿತ್ ಆನಂದ ಎಂಬ ಅಮೃತ ಸ್ವರೂಪಳಾದವಳು ; ಸಕಲ ಉಯಿರುಕ್ಕುಯಿರಾಯವಳ್ ನೀ–ನೀನು ಸಮಸ್ತ ಜೀವಿಗಳಿಗೂ ಜೀವವಾಗಿರುವವಳು ; ತತ್ತುವಮಸ್ಯಾದಿ–ತತ್ವಮಸಿ ಮೊದಲಾದ ; ಮಹಾವಾಕ್ಕಿಯಂ–ಮಹಾವಾಕ್ಯಗಳೂ ; ತತ್ ಪರವಸ್ತುವುಂ–ಅವು ನಿರ್ದೇಶಿಸುವ ಪರವಸ್ತುವೂ ; ನೀ–ನೀನೇ ಆಗಿದ್ದೀಯೆ ; ಸತ್ವಗುಣವೋಡು–ಸಾತ್ವಿಕ ಗುಣಗಳಿಂದ ಕೂಡಿ ; ಭಕ್ತಿ ಶೈಪ್ಪವರ್–ಭಕ್ತಿಯನ್ನು ಆಚರಿಸುವವರ ; ಭವರ್ ಪಾಪಮುಂ–ಭವದ (ಈ ಜನ್ಮದ, ದೇಹದ) ಪಾಪಗಳನ್ನು ; ತಾಪಮುಂ–ಸಂಕಟಗಳನ್ನೂ ; ಅರ–ಹೋಗಲಾಡಿಸಿ ; ಇನ್ಮೈಯಿಲ್–ಈ ದೇಹದಲ್ಲಿಯೇ (ಇಹದಲ್ಲಿಯೇ) ; ವರ ಸಂತಾನ–ಶ್ರೇಷ್ಠವಾದ ಸಂತಾನ ; ಸೌಭಾಗ್ಯ ಸಂಪತ್ತೋಡು–ಸಂಪತ್ತಿನಿಂದ ಕೂಡಿದ ; ವರಂ ಅರುಳ್–ವರವನ್ನು ನೀಡುವ ; ನಿರತಿಶಯ–ಅತಿಶಯವಾದ ; ಇನ್ಬಮುಂ ತರುಂ–ಸುಖವನ್ನು ಉಂಟುಮಾಡುವ.

**ತಾತ್ಪರ್ಯ :** ದೇವಿಯನ್ನು ಕಲ್ಪವೃಕ್ಷವೆಂದು ಪ್ರಾರ್ಥಿಸುತ್ತಾರೆ ಕವಿ. ನನ್ನನ್ನು ಕಡೆಗಣ್ಣಿನಿಂದ ನೋಡು, ಕರುಣೆಯೆಂಬ ಕಡೆಗಣ್ಣಿನಿಂದ ನೋಡು. ಯೋಗಿಗಳು, ಸಿದ್ಧರು, ಜ್ಞಾನಿಗಳು, ವಿರಕ್ತರು ಮೊದಲಾದವರಿಗೆ ಶ್ರೇಷ್ಠವಾದ ವರಗಳನ್ನು ನೀಡುವವಳೂ, ಲಕ್ಷ್ಮಿಸರಸ್ವತಿಯರು ಪೂಜಿಸುವವಳೂ ಆದ ದೇವಿಯೇ ಕರುಣೆಯಿಂದ ನೋಡು. ಸತ್ ಚಿತ್ ಆನಂದವೆಂಬ ಅಮೃತ ಸ್ವರೂಪವಾದವಳು ; ಸಕಲ ಜೀವಿಗಳಿಗೆ ಉಸಿರಾದವಳು ; ತತ್ವಮಸಿ ಮೊದಲಾದ ಮಹಾ ವಾಕ್ಯಗಳೂ, ಆ ವಾಕ್ಯಗಳು ಸೂಚಿಸುವ ಪರವಸ್ತುವೂ ಆದವಳು ; ಸತ್ವಗುಣಗಳಿಂದ ಪೂಜಿಸುವವರ ಭವ ತಾಪ ಪಾಪಗಳನ್ನು ಪರಿಹರಿಸಿ, ಇಹದಲ್ಲಿ ಸಂತಾನ ಸೌಭಾಗ್ಯ ಸಂಪತ್ತುಗಳನ್ನು ನೀಡಿ ಅತಿಶಯ ಸುಖನನ್ನು ಉಂಟುಮಾಡುವ ದೇವಿಯೇ ಕಾಪಾಡು.

* * *

೪೬

ರಾಗ : ಶಂಕರಾಭರಣ ತಾಳ : ಆದಿ ತ್ಯಾಗರಾಜರು

ಪಲ್ಲವಿ : ಏಮಿ ನೇರಮು ನನ್ನು ಬ್ರೋವ ಎಂತ ಭಾರಮು ನಾವಲ್ಲ ? (ಏಮಿ ನೇರಮು)

ಅನುಪಲ್ಲವಿ : ಸಾಮಜರಾಜ ವರದುಡನಿ ಮುನುಲ
ಸತ್ಕೀರ್ತಿಗಲ್ಗ ಲೇದಾ ನಾಪೈ (ಏಮಿ ನೇರಮು)

ಚರಣ : ದೀನಬಂಧು ದೇವದೇವುಡ ಸ
ಮಾನ ಘನುಡನಿ ಧರ್ಮಾತ್ಮುಡನುಚುನು
ಜ್ಞಾನಧನುಲು ಗುಣಗಾನಮು ಸೇಯ ಬಿ
ರಾನ ಜೂಡವು ತ್ಯಾಗರಾಜಾರ್ಚಿತ ನಾಪೈ (ಏಮಿ ನೇರಮು)

**ಪ್ರತಿಪದಾರ್ಥ :** ನನ್ನು ಬ್ರೋವ–ನನ್ನನ್ನು ಕಾಪಾಡಲು ; ಏಮಿ ನೇರಮು–ಏಕಿಷ್ಟು ತಡ ? ನಾವಲ್ಲ ಎಂತ ಭಾರಮು–ನನ್ನನ್ನು ರಕ್ಷಿಸುವುದು ನಿನಗೆ ಅಷ್ಟು ಭಾರವೆ ? ಸಾಮಜವರದುಡು–ಗಜೇಂದ್ರನಿಗೆ ಅನುಗ್ರಹ ಮಾಡಿದವನು ; ಅನಿ–ಎಂಬುದಾಗಿ ; ಮುನುಲ ಸತ್ಕೀರ್ತಿ ಗಲ್ಗ ಲೇದಾ–ಮುನಿಗಳಿಂದ ಸತ್ಕೀರ್ತಿಯನ್ನು ಪಡೆಯಲಿಲ್ಲವೆ ? ನಾ ಪೈ–ನನ್ನ ಮೇಲೆ (ಕೃಪೆ ತೋರಿಸು). ದೀನ ಬಂಧು ; ದೇವ ದೇವುಡ ಸಮಾನ ಘನುಡು–ದೇವ ದೇವತೆಗಳೆಲ್ಲರ ಸಮನಾದ ಘನತೆಯುಳ್ಳವನು ; ಧರ್ಮಾತ್ಮುಡು–ಧರ್ಮಾತ್ಮನಾದವನು ; ಅನುಚುನು–ಎಂಬುದಾಗಿ ; ಜ್ಞಾನಧನುಲು–ಜ್ಞಾನಿಗಳು ; ಗುಣಗಾನಮು ಸೇಯ–ನಿನ್ನ ಗುಣಗಾನ ಮಾಡಿದರೆ ; ಬಿರಾನ–ಅತಿ ಶೀಘ್ರವಾಗಿ ; ಜೂಡವು–ನೋಡುವುದಿಲ್ಲವೆ ? ತ್ಯಾಗರಾಜನಿಂದ ಅರ್ಚಿತನಾದ ಶ್ರೀರಾಮಚಂದ್ರನೆ ; ನಾಪೈ–ನನ್ನ ಮೇಲೆ (ಕೃಪೆ ತೋರು).

* * *

## ೪೭

ರಾಗ : ಶಂಕರಾಭರಣ ತಾಳ : ಆದಿ ತ್ಯಾಗರಾಜರು

ಪಲ್ಲವಿ : ಎದುಟ ನಿಲಚಿತೇ ನೀದು ಸೊಮ್ಮುಲೇಮಿ ಪೋವುರಾ (ಎದುಟ)

ಅನುಪಲ್ಲವಿ : ನುದುಟಿವ್ರಾತ ಗಾನಿಮಟ್ಟು ಮಿಾರನು ನಾ
ತರಮಾ ತೆಲಿಸಿ ಮೋಸಬೋದುನಾ (ಎದುಟ)

ಚರಣ : 1 ಸರಾಸರಿಗ ಜೂತುರಾ ನಾದು ಯವ
ಸರಾಲ ತೆಲಿಯುಮು ವರಾಲಡುಗ ಜಾ
ಲರಾ ಸಕಲ ದೇವರಾಯ ಮನವಿ ವಿ
ನರಾಘಹರ ಸುಂದರಾಕಾರ ನಾ (ಎದುಟ)

2 ವಿದೇಹಜಾ ರಮಣ ದೇವ ಬ್ರೋವಗ
ನಿದೇ ಸಮಯಮನ್ಯ ದೇವತಲ ವೇ
ಡದೇ ಮನಸುದೆಲಿಯದೇಮಿ ರಾಘವ
ಇದೇಟಿ ಶೌರ್ಯಮು ಪದೇ ಪದೇ ನಾ (ಎದುಟ)

3 ತರಾನ ದೊರಕನಿ ಪರಾಕು ನಾಯೆಡ
ನು ರಾಮ ಜೇಸಿತೆ ಸುರಾಸುರಲು ಮೆ
ತ್ತುರಾ ಇಪುಡು ಈ ಹರಾಮಿತನ ಮೇ
ಲರಾ ಭಕ್ತ ತ್ಯಾಗರಾಜನುತ ನಾ (ಎದುಟ)

**ಪ್ರತಿಪದಾರ್ಥ :** ಎದುಟ–ನನ್ನೆದುರಿಗೆ; ನಿಲಚಿತೇ–ನಿಂತಮಾತ್ರಕ್ಕೆ ; ನೀದು–ನಿನ್ನ ; ಸೊಮ್ಮುಲೇಮಿ ಪೋವುರಾ–ಸಂಪತ್ತೇನು ಕೊಳ್ಳೆ ಹೋಗುತ್ತದೆಯೆ ? ನುದುಟಿ ವ್ರಾತ–ನೀನು ಬರೆದ ; ಕಾನಿಮಟ್ಟು–ಹಣೆ ಬರಹವನ್ನು ; ಮಿೀರನು–ಮಿೀರಲು ; ನಾ ತರಮಾ–ನನಗೆ ಸಾಧ್ಯವೆ ? ತೆಲಿಸಿ–ಇದನ್ನು ತಿಳಿದು ; ಮೋಸಬೋದುನಾ–ನಾನು ಮೋಸ ಹೋಗುವೆನೆ ? ಸರಾಸರಿಗ ಜೂತುರಾ–ಸಮಾನವಾಗಿ ನನ್ನನ್ನು ನೋಡಪ್ಪ ; ನಾದು–ನನ್ನ ; ಅವಸರಾಲ ತೆಲಿಯುಮು–ಆತುರವನ್ನು ತಿಳಿದುಕೊ ; ವರಾಲಡುಗಜಾಲರಾ–ನಾನು ಯಾವ ವರಗಳನ್ನೂ ಕೇಳುವುದಿಲ್ಲವಪ್ಪ ; ಅಘಹರ–ಪಾಪಗಳನ್ನು ಹೋಗಲಾಡಿಸುವವನೆ ; ಸುಂದರಾಕಾರ ; ಮನವಿ ವಿನರಾ–ನನ್ನ ಬಿನ್ನಹವನ್ನು ಕೇಳಪ್ಪ ; ನಾ–ನನ್ನ (ಎದುರಿಗೆ ನಿಂತರೆ ನಿನ್ನದೇನು ಹೋಗುತ್ತದೆ ?) ವಿದೇಹಜಾ ರಮಣ–ವಿದೇಹರಾಜನ ಮಗಳಾದ ಸೀತೆಯ ಪತಿಯೆ ; ದೇವ ; ಬ್ರೋವಗನಿದೇ ಸಮಯಮು–ಕಾಪಾಡಲು ಇದೇ ಸೂಕ್ತ ಸಮಯ ; ಅನ್ಯದೇವತಲ ವೇಡದೇ–(ನಾನು) ಬೇರೆ ದೇವತೆಗಳನ್ನು ಬೇಡದವನು ಎಂಬ ; ಮನಸು ತೆಲಿಯದೇಮಿ–ನನ್ನ ಮನಸ್ಸು ನಿನಗೆ ತಿಳಿಯದೆ ; ರಾಘವ–ಶ್ರೀರಾಮನೆ ; ಇದೇಟಿ ಶೌರ್ಯಮು–ಇದೇನು ನಿನ್ನ ಶೌರ್ಯ ? ಪದೇ ಪದೇ, ನಾ ಎದುಟ–ನನ್ನೆದುರಿಗೆ (ನಿಂತಮಾತ್ರಕ್ಕೆ ನಿನ್ನದೇನು ಹೋದೀತು ?) ; ತರಾನ ದೊರಕನಿ–ಸುಲಭವಾಗಿ ಯಾರಿಗೂ ತೋರದ ; ಪರಾಕು–ಈ ಬಗೆಯ ಆದರವನ್ನು (ವ್ಯಂಗ್ಯವಾಗಿ ಅನಾದರಣೆಯನ್ನು) ; ನಾಯೆಡನು–ನನ್ನ ಬಗೆಗೆ ; ಜೇಸಿತೆ–ಮಾಡಿದರೆ ; ಸುರಾಸುರುಲು–ದೇವತೆಗಳು ; ಮೆತ್ತುರಾ–ಮೆಚ್ಚುತ್ತಾರೆಯೆ ? ಇಪುಡು–ಇನ್ನು ಈಗಲೂ ; ಈ ಹರಾಮಿತನ ಮೇಲರಾ–ಈ ಬಗೆಯ ದುಷ್ಟತನವೇಕೆ ; ಭಕ್ತ ತ್ಯಾಗರಾಜನುತ–ಭಕ್ತನಾದ ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರ ; ನಾ ಎದುಟ–ನನ್ನ ಎದುರಿಗೆ (ನಿಂತಮಾತ್ರಕ್ಕೆ ನಿನ್ನದೇನು ನಷ್ಟವಾಗುತ್ತದೆ ?)

* * *

೪೮

ರಾಗ : ಶಂಕರಾಭರಣ ತಾಳ : ಆದಿ ತ್ಯಾಗರಾಜರು

ಪಲ್ಲವಿ :
ಸ್ವರರಾಗ ಸುಧಾರಸ ಭಕ್ತಿ
ಸ್ವರ್ಗಾಪವರ್ಗಮುರಾ, ಓ ಮನಸಾ (ಸ್ವರರಾಗ)

ಅನುಪಲ್ಲವಿ :
ಪರಮಾನಂದಮನು ಕಮಲಮುಪೈ
ಬಕ ಭೇಕಮು ಚೆಲಿಗಿಯೇಮಿ ಮನಸಾ (ಸ್ವರರಾಗ)

ಚರಣ :
1 ಮೂಲಾಧಾರಜ ನಾದಮೆರುಗುಟ ಮುದಮುಗು ಮೋಕ್ಷಮುರಾ
ಕೋಲಾಹಲ ಸಪ್ತಸ್ವರ ಗೃಹಮುಲ ಗುರುತೇ ಮೋಕ್ಷಮುರಾ ; ಓ ಮನಸಾ (ಸ್ವರರಾಗ)

2 ಬಹುಜನ್ಮಮುಲಕು ಪೈನಿ ಜ್ಞಾನಿಯೈ ಬರಗುಟ ಮೋಕ್ಷಮುರಾ
ಸಹಜ ಭಕ್ತಿತೋ ರಾಗ ಜ್ಞಾನ ಸಹಿತುಡು ಮುಕ್ತುಡುರಾ ; ಓ ಮನಸಾ (ಸ್ವರರಾಗ)

3 ಮದ್ದಳ ತಾಳ ಗತುಲು ತೆಲಿಯಕನೆ ಮರ್ದಿಂಚುಟ ಸುಖಮಾ
ಶುದ್ಧ ಮನಸುಲೇಕ ಪೂಜ ಸೇಯುಟ ಸೂಕರ ವೃತ್ತಿರಾ ; ಓ ಮನಸಾ (ಸ್ವರರಾಗ)

4 ರಜತಗಿರೀಶುಡು ನಗಜಕು ದೆಲ್ಪು ಸ್ವರಾರ್ಣವ ಮರ್ಮಮುಲು
ವಿಜಯಮು ಗಲ ತ್ಯಾಗರಾಜುಡೆರಗೆ ವಿಶ್ವಸಿಂಚಿ ದೆಲುಸುಕೊ ; ಓ ಮನಸಾ (ಸ್ವರರಾಗ)

**ಪ್ರತಿಪದಾರ್ಥ** : ಓ ಮನಸಾ–ಎಲೆ ಮನಸ್ಸೇ ; ಸ್ವರರಾಗ ಸುಧಾರಸ ಭಕ್ತಿ–ಸ್ವರ ರಾಗಗಳೆಂಬ ಅಮೃತದಿಂದ ಕೂಡಿದ ಭಕ್ತಿಯೇ ; ಸ್ವರ್ಗಾಪವರ್ಗಮುರಾ–ಸ್ವರ್ಗ ಮತ್ತು ಮೋಕ್ಷ ; ಆ ಪರಮಾನಂದವನ್ನು ; ಕಮಲಮುಪೈ–ತಾವರೆಯ ಮೇಲೆ ಕುಳಿತ ; ಬಕ ಭೇಕಮು ಚೆಲಿಗಿಯೇಮಿ–ಬಕಪಕ್ಷಿ, ಕಪ್ಪೆಗಳು ತಿಳಿಯುತ್ತವೆಯೆ ? ಮೂಲಾಧಾರಜ–ಮೂಲಾಧಾರ ಸ್ಥಾನದಲ್ಲಿ ಹುಟ್ಟುವ ; ನಾದಮೆರುಗುಟ–ನಾದವನ್ನು ತಿಳಿಯುವ ; ಮುದಮುಗು–ಮುದವೇ ; ಮೋಕ್ಷವಯ್ಯ ; ಕೋಲಾಹಲ ವನ್ನುಂಟು ಮಾಡುವ ; ಸಪ್ತಸ್ವರ ಗೃಹಮುಲ–ಏಳು ಸ್ವರ ಸ್ಥಾನಗಳನ್ನು ; ಗುರುತೇ–ತಿಳಿಯುವುದೇ ; ಮೋಕ್ಷವಯ್ಯ ; ಬಹು ಜನ್ಮಮುಲಕು ಪೈನಿ–ಅನೇಕ ಜನ್ಮಗಳ ನಂತರ ; ಜ್ಞಾನಿಯೈ ಪ(ಬ)ರಗುಟ–ಜ್ಞಾನಿಯಾಗಿ ಹುಟ್ಟುವುದೇ ; ಮೋಕ್ಷ ; ಸಹಜ ಭಕ್ತಿತೋ–ಸಹಜವಾದ ಭಕ್ತಿಯಿಂದ ; ರಾಗಜ್ಞಾನ ಸಹಿತುಡು–ರಾಗಜ್ಞಾನ ಸಹಿತವಾಗಿ ಹುಟ್ಟುವುದು ಮುಕ್ತಿ ; ಮದ್ದಳ ತಾಳ ಗತುಲು–ಮೃದಂಗ ತಾಳಗಳ ಲಯವು ; ತೆಲಿಯಕನೆ–ತಿಳಿಯದೆ ; ಮರ್ದಿಂಚುಟ–ಸುಮ್ಮನೆ ಬಡಿಯುವುದು ; ಸುಖವೆ ? ಶುದ್ಧಮನಸು ಲೇಕ–ಪರಿಶುದ್ಧವಾದ ಮನಸ್ಸಿಲ್ಲದೆ ; ಪೂಜಸೇಯುಟ–ಪೂಜೆ ಮಾಡುವುದು ; ಸೂಕರ ವೃತ್ತಿರಾ–ಹಂದಿಯ ಕೆಲಸದ ಹಾಗೆ ; ಎಲೆ ಮನಸ್ಸೆ ; ರಜತಗಿರೀಶುಡು–ಬೆಳ್ಳಿಯ ಬೆಟ್ಟಕ್ಕೆ ಒಡೆಯನಾದ ಶಿವನು ; ನಗಜಕು ದೆಲ್ಪು–ಪಾರ್ವತಿಗೆ ತಿಳಿಸಿದ ; ಸ್ವರಾರ್ಣವ ಮರ್ಮಮುಲು–ಸ್ವರಸಾಗರದ ಮರ್ಮವು ; ವಿಜಯಮುಗಲ–ವಿಜಯಶಾಲಿಯಾದ ; ತ್ಯಾಗರಾಜು ಡೆರಗೆ–ತ್ಯಾಗರಾಜನಿಗೆ ತಿಳಿದಿರುವ ಆ ರಹಸ್ಯವನ್ನು ; ವಿಶ್ವಸಿಂಚಿ–ವಿಶ್ವಾಸದಿಂದ ; ತೆಲುಸುಕೊ ಮನಸಾ–ತಿಳಿದುಕೊ ಮನಸ್ಸೇ.

* * *

